# ಋಗ್ವಿಧಾನಮ್

1. ಸ್ವಯಂಭುವೇ ಬ್ರಹ್ಮಣೇ ವಿಶ್ವಗೋಪ್ತ್ರೇ
ನಮಸ್ಕೃತ್ವಾ ಮಂತ್ರದೃಗ್ಭ್ಯಸ್ತಥೈವ ।
ವಿವಕ್ಷುರಸ್ಮ್ಯೃಗ್ವಿಧಾನಂ ಪುರಾಣಂ
ಪುರಾದೃಷ್ಟಮೃಷಿಭಿರ್ಮಂತ್ರದೃಗ್ಭಿಃ ॥

ಬ್ರಹ್ಮನಿಗೆ ನಮಸ್ಕರಿಸಿ, ಮಂತ್ರದರ್ಶನ ಮಾಡಿದ ಋಷಿಗಳಿಗೂ ನಮಿಸಿ ‘ಋಗ್ವಿಧಾನ’ ಎಂಬ ಗ್ರಂಥವನ್ನು ಆರಂಭಿಸುತ್ತಿದ್ದೇನೆ.

2. ಮಂತ್ರೇಭ್ಯೋ ಮಂತ್ರದೃಗ್ಭ್ಯಶ್ಚ ಸಮಾಮ್ನಾಯಾನುಪೂರ್ವಶಃ ।
ಕರ್ಮಣಾಮೃಷಿದೃಷ್ಟಾನಾಂ ವಿಧಿಂ ಪ್ರೋವಾಚ ಶೌನಕಃ ॥

ಋಷಿಗಳು ತಿಳಿಸಿದ ಮಂತ್ರಗಳ ಅನುಷ್ಠಾನ ಕ್ರಮವನ್ನು ಶೌನಕರು ತಿಳಿಸುತ್ತಾರೆ.

3. ಋಷಿಭಿರ್ವಿವಿಧಾ ಮಂತ್ರಾ ದೃಷ್ಟಾದೃಷ್ಟ ಪ್ರಯೋಜನಾಃ ।
ಪ್ರಯೋಜನಾಯ ಚೋದ್ದಿಷ್ಟಾ-ಸ್ತಸ್ಮಿಂಸ್ತಸ್ಮಿನ್‌ಪ್ರದರ್ಶಿತಾಃ ।

ಋಷಿಗಳು ಸರ್ವರ ಹಿತಕ್ಕಾಗಿ ಅನೇಕ ಪ್ರಯೋಜನಗಳನ್ನು ಹೊಂದ ಬಹುದಾದ ನಾನಾ ಮಂತ್ರಗಳನ್ನು ಪ್ರತ್ಯಕ್ಷಿಸಿ ನಮಗೆ ಅನುಗ್ರಹಿಸಿರುತ್ತಾರೆ.

4. ನಾನಾರ್ಥಾನಿ ಚ ಕರ್ಮಾಣಿ ಶಾಂತಿಪುಷ್ಟ್ಯಾಶ್ರಯಾಣಿ ಚ ।
ಸಿದ್ಧಯಶ್ಚ ತಪೋಮೂಲಾಃ ಶ್ರದ್ಧಧಾನಸ್ಯ ಕುರ್ವತಃ ॥

5. ಸ್ತುತ್ಯಾದಯೋ ಯೇ ವಿಕಾರಾಃ ಪ್ರದಿಷ್ಟಾಃ
ತಥಾರ್ಥವಾದಾ ಋಕ್ಷು ಸೂಕ್ತೇಷು ಚೈವ ।
ಯೈರ್ಯೈಃ ಕಾಮೈರ್ಋಷಿಭಿರ್ದೇವತಾಶ್ಚ
ತಷ್ಟೂಯಂತೇ ತಾನ್‌ಛೃಣುಷ್ವೋಚ್ಯಮಾನಾನ್ ॥





ಶಾಂತಿ, ಪುಷ್ಟಿ ಇತ್ಯಾದಿ ಸಿದ್ಧಿಗಳ ಪ್ರಾಪ್ತಿಗಾಗಿ ಯಾವ ಮಂತ್ರಗಳು, ಅವುಗಳ ಅನುಷ್ಠಾನ ವಿಧಿಗಳು ಇವೆಯೋ ಅವುಗಳನ್ನು ತಿಳಿಸಲು ಉಪಕ್ರಮಿಸುತ್ತೇವೆ.

6. ಆಯುಃ ಸ್ವರ್ಗೋ ದ್ರವಿಣಂ ಸೂನವಶ್ಚ
ಚತುರ್ವಿಧಂ ಪ್ರೋಕ್ತಮಾಶಾಸ್ಯಮಗ್ರೇ।
ಅನ್ಯೇ ಕಾಮಾಃ ಶತಶಃ ಸಂಪ್ರದಿಷ್ಟಾಃ
ಸಂಸ್ತುವದ್ಭಿರ್ಋಷಿಭಿರ್ದೇವತಾಶ್ಚ ॥

7. ಸಿದ್ಧಾ ಮಂತ್ರಾ ವಿವಿಧಾ ಬ್ರಾಹ್ಮಣಸ್ಯ
ಫಲಂ ಯಚ್ಛಂತಿ ವಿಧಿವತ್ ಪ್ರಯುಕ್ತಾಃ ।
ಸತ್ಯಂ ತೇಷಾಂ ಸಾಧನಂ ಸಂಯಮಶ್ಚ
ಶಮಸ್ತಿತಿಕ್ಷಾನಸೂಯಾ ದಮಶ್ಚ॥

ಆಯುಸ್ಸು, ಸ್ವರ್ಗ, ಧನ, ಸಂತತಿ, ಧರ್ಮಾದಿ ಚತುರ್ವಿಧ ಪುರುಷಾರ್ಥಗಳು ಇತ್ಯಾದಿ ನೂರಾರು ಕಾಮನೆಗಳೆಲ್ಲವೂ ಶಮ ದಮಾದಿ ಗುಣಿಯಾದ, ಅಸೂಯಾ ರಹಿತನಾದ ಬ್ರಾಹ್ಮಣನಿಂದ ವಿಧಿವತ್ ಮಂತ್ರಾನುಷ್ಠಾನುಪ್ರಯೋಗದಿಂದ ಸಿದ್ಧಿಸುತ್ತವೆ.

8. ತಸ್ಮಾದ್ದ್ವಿಜಃ ಪ್ರಶಾಂತಾತ್ಮ ಜಪಹೋಮ ಪರಾಯಣಃ ।
ತಪಸ್ಯಧ್ಯಯನೇ ಯುಕ್ತೋ ಭವೇದ್ಭೂತಾನುಕಂಪಕಃ ॥

ಆದ್ದರಿಂದ ದ್ವಿಜನು ಪ್ರಶಾಂತಾತ್ಮನಾಗಿ, ಜಪ, ಹೋಮಾದಿ ತಪಸ್ಸು, ಸ್ವಾಧ್ಯಾಯ ಪರಾಯಣನಾಗಿರಬೇಕು.

9. ಕ್ಷತ್ರಿಯೋ ಬಾಹುವೀರ್ಯೇಣ ತರೇದಾಪದಮಾತ್ಮನಃ ।
ಧನೇನ ವೈಶ್ಯಃ ಶೂದ್ರಸ್ತು ಜಪಹೋಮೈರ್ದ್ವಿಜೋತ್ತಮಃ ॥

ಕ್ಷತ್ರಿಯನು ಬಾಹುಬಲದಿಂದ, ಧನದಿಂದ ವೈಶ್ಯ ಶೂದ್ರರು, ಜಪ ಹೋಮಗಳಿಂದ ಬ್ರಾಹ್ಮಣರು ಕಷ್ಟ ನಿವಾರಿಸಿಕೊಳ್ಳಬೇಕು.

10. ತಪಸಾ ಸ್ವರ್ಗಮಾಪ್ನೋತಿ ತಪಸಾ ವಿಂದತೇ ಮಹತ್ ।
ತಪೋಯುಕ್ತಸ್ಯ ಸಿಧ್ಯಂತಿ ಕರ್ಮಾಣಿ ನಿಯತಾತ್ಮನಃ ॥

ತಪಸ್ಸಿನಿಂದ ಸ್ವರ್ಗ ಪ್ರಾಪ್ತಿ, ಮೋಕ್ಷ ಸಾಧನೆ, ಮಹತ್ ಸುಖ.

11. ವಿದ್ವೇಷಣಂ ಸಂವನನಂ ವಿಷಘ್ನಂ ರೋಗನಾಶನಂ।
ಯೇನ ಯೇನಾರ್ಥಮೃಷಿಣಾ ಯದರ್ಥಂ ದೇವತಾಃಸ್ತುತಾಃ ॥

12. ಸಸಕಾಮಃ ಸಮೃದ್ಧಶ್ಚ ತೇಷಾಂ ತೇಷಾಂ ತಥಾ ತಥಾ ।
ತಾನಿ ಕರ್ಮಾಣಿ ವಕ್ಷ್ಯಾಮಿ ವಿವಿಧಾನಿ ಚ ಕರ್ಮಣಾಂ ॥

ವಿದ್ವೇಷಣ, ವಿಷನಾಶ, ರೋಗದಿಂದ ಮುಕ್ತಿ ಇತ್ಯಾದಿಗಳ ಸಿದ್ಧಿಗಾಗಿ ಯಾವ ಯಾವ ಋಷಿ ಯಾವ ಯಾವ ಮಂತ್ರಗಳನ್ನು ತಿಳಿಸಿದ್ದಾರೋ, ಅವುಗಳನ್ನು ಅವುಗಳ ವಿಧಿಯನ್ನು ತಿಳಿಸುತ್ತೇನೆ.

13. ಪುರಶ್ಚರಣ ಮಾದೌತು ಕರ್ಮಣಾಂ ಸಿದ್ಧಿ ಕಾರಕಂ।
ಸ್ವಾಧ್ಯಾಯಾಭ್ಯಸನಸ್ಯಾದೌ ಪ್ರಾಜಾಪತ್ಯಂ ಚರೇತ್‌ದ್ವಿಜಃ॥

ಸ್ವಾಧ್ಯಾಯವನ್ನು ಮಾಡುವವನು ಮೊದಲು ಜಪವನ್ನೂ, ನಂತರ ಪ್ರಾಜಾಪತ್ಯವನ್ನೂ ಆಚರಿಸಬೇಕು.

14. ಕೇಶಶ್ಮಶ್ರುಲೋಮನಖಾನ್ ವಾಪಯಿತ್ವಾಪ್ಲುತಃ ಶುಚಿಃ।
ತಿಷ್ಠೇದಹನಿ ರಾತ್ರೌತು ಶುಚಿರಾಸೀತ ವಾಗ್ಯತಃ ॥

ಕೂದಲು, ಉಗುರುಗಳನ್ನು ಕತ್ತರಿಸಿಕೊಂಡು ಸ್ನಾನಮಾಡಿ ಶುಚಿಯಾಗಿ ಮೌನವ್ರತಿಯಾಗಬೇಕು.

15. ಸತ್ಯವಾದೀ ಪವಿತ್ರಾಣಿ ಜಪೇದ್ವ್ಯಾಹೃತಯಸ್ತಥಾ।
ಓಂಕಾರಾದ್ಯಾಸ್ತುತಾಜಪ್ತ್ವಾ ಸಾವಿತ್ರೀಂ ಚ ತದಿತ್ಯೃಚಂ॥

ಸತ್ಯವಂತನಾಗಿ ಪವಿತ್ರವಾದ ವ್ಯಾಹೃತಿ ಜಪವನ್ನು ಓಂಕಾರದೊಂದಿಗೆ ಮಾಡಿ ಸಾವಿತ್ರೀ ಮಂತ್ರವನ್ನು ಜಪಿಸಬೇಕು.


shrinath.udupa@gmail.com

16. ಆಪೋಹಿಷ್ಠೇತಿ ಸೂಕ್ತಂ ತು ಶುದ್ಧವತ್ಯೋಽಘಮರ್ಷಣಂ ।
ಶಂವತ್ಯಃ ಸ್ವಸ್ತಿಮತ್ಯಶ್ಚ ಪಾವಮಾನ್ಯಸ್ತಥೈವ ಚ ॥

'ಆಪೋಹಿಷ್ಠಾ', 'ಅಘಮರ್ಷಣ', ಶಂನ ಇಂದ್ರಾಗ್ನೀ, ಸ್ವಸ್ತಿ ಪವಮಾನ ಸೂಕ್ತಗಳನ್ನು ಪಠಿಸಬೇಕು.

17. ಸರ್ವತ್ರೈತತ್ ಪ್ರಯೋಕ್ತವ್ಯಮಾದಾವಂತೇ ಚ ಕರ್ಮಣಾಂ ।
ಆ ಸಹಸ್ರಾದಾಶತಾದ್ವಾಽಽ ದಶಾಂತಮಥ ವಾ ಜಪೇತ್ ॥

ಎಲ್ಲ ಕರ್ಮಗಳ ಮೊದಲು ಮತ್ತು ಕೊನೆಯಲ್ಲಿ ಇವುಗಳನ್ನು ಸಹಸ್ರಬಾರಿ ಅಥವಾ ನೂರು ಬಾರಿ ಅಥವಾ ಪತ್ತು ಬಾರಿ ಜಪಿಸಬೇಕು.

18. ಓಂಕಾರಂ ವ್ಯಾಹೃತೀಸ್ತಿಸ್ರಃ ಸಾವೀತ್ರೀಮಥ ವಾಯುತಂ।
ತರ್ಪಯಿತ್ವಾದ್ವಿರಾಚಾರ್ಯಾ - ನೃಷೀಂಶ್ಛಂದಾಂಸಿ ದೇವತಾಃ॥

ಓಂಕಾರದೊಡನೆ ವ್ಯಾಹೃತಿ ಮತ್ತು ಸಾವಿತ್ರಿಯನ್ನು ಹತ್ತುಸಾವಿರ ಜಪಿಸಿ ಋಷಿ, ಛಂದಸ್ಸು ಮತ್ತು ಆಚಾರ್ಯರಿಗೆ ಜಲತರ್ಪಣ ಕೊಡಬೇಕು.

19. ಪ್ರಪದ್ಯೇತ ವಿರೂಪಾಕ್ಷಂ ರೌದ್ರಮತ್ರಗಣಂ ಜಪನ್ ।
ಅನಾರ್ಯೈರ್ನ ಚ ಭಾಷೇತ ನ ಶೂದ್ರೈರ್ನಾಪಿ ಗರ್ಹಿತೈಃ॥

ರುದ್ರಮಂತ್ರಗಳಿಂದ ರುದ್ರನನ್ನು ಜಪಿಸಿ ಸ್ತುತಿಸಬೇಕು. ಅನಾರ್ಯ, ಶೂದ್ರ, ಕ್ಷುದ್ರ ಜನಗಳೊಡನೆ ಮಾತನಾಡಬಾರದು.

20. ನ ರಜಸ್ವಲಯಾನಾರ್ಯಾ ಪತಿತೈರ್ನಾಂ ತ್ಯಜ್ಯೈರ್ನೃಭಿಃ।
ನ ದೇವಬ್ರಾಹ್ಮಣದ್ವಿಷ್ಟೈ - ರ್ನಾಚಾರ್ಯ ಗುರುನಿಂದಕೈಃ॥

ರಜಸ್ವಲೆ, ಅಂತ್ಯಜನ, ಬ್ರಾಹ್ಮಣದ್ವೇಷಿ, ದೇವದ್ವೇಷಿ, ಆಚಾರ್ಯಗುರು ನಿಂದಕರು- ಇವರುಗಳೊಂದಿಗೂ ಮಾತನಾಡಬಾರದು.

21. ನ ಮಾತೃಪಿತೃವದ್ವಿಷ್ಟೈ- ರ್ನಾವಮನ್ಯೇತ ಕಂಚನ।
ಮಂಗಲಾಚಾರಯುಕ್ತಃ ಸ್ಯಾತ್ ತ್ರಿರಹ್ನೋದಭ್ಯುದಯಾದಪಃ॥ (?)

ಮಾತಾಪಿತೃಗಳನ್ನು ದ್ವೇಷಿಸದೆ, ಅವಮಾನಿಸದೆ ಮಂಗಲಾಚಾರಿಯಾಗಿರಬೇಕು.

22. ಅಂತೇ ದ್ವಾದಶರಾತ್ರಸ್ಯ ಸ್ಥಾಲೀಪಾಕಂ ಪ್ರಕಲ್ಪಯೇತ್।
ಅಗ್ನಯೇ ಚಾಥ ಸೋಮಾಯ ತೃತೀಯಾ ಚ ತಯೋಃ ಸಹ॥

23. ವೈಶ್ವದೇವೀ ಚ ರೌದ್ರೀ ಚ ಜುಹುಯಾದುತ್ತರೇ ತತಃ।
ಅವಸಾನಸ್ಯ ಪತಯೇ ತಥಾನುಮತಯೇಽಪಿ ಚ॥

24. ಧನ್ವಂತರಯ ಇತ್ಯನ್ಯಾ ಗಂಧರ್ವಾಪ್ಸರಸಾಮಪಿ।
ದಶಮೀ ಬ್ರಾಹ್ಮಣಸ್ಪತ್ಯಾ ಪರಾ ತು ಬ್ರಹ್ಮಣೇ ಸ್ಮೃತಾ॥

25. ಸರಸ್ವತ್ಯೈ ತಥಾ ವಿಷ್ಣೋ-ರಂತ್ಯಾ ಸೌವಿಷ್ಟಕೃತ್ಯಪಿ।
ಆಜ್ಯಾಹುತಯ ಏವಾದೌ ಸ್ಥಾಲೀಪಾಕೇ ಹುತೇ ಪುನಃ॥

ಹನ್ನೆರಡನೇ ರಾತ್ರಿಯಲ್ಲಿ ಸ್ಥಾಲೀಪಾಕವನ್ನು ಆಚರಿಸಬೇಕು. ಅಗ್ನಿ, ಸೋಮ, ಅಗ್ನೀಷೋಮ, ವಿಶ್ವೇದೇವರು, ರುದ್ರ, ಧನ್ವಂತರಿ, ಅನುಮತಿ, ಗಂಧರ್ವಾಪ್ಸರರು, ಬ್ರಹ್ಮಣಸ್ಪತಿ, ಬ್ರಹ್ಮ, ಸರಸ್ವತೀ, ವಿಷ್ಣು, ಸ್ವಿಷ್ಟಕೃತ್ ದೇವತೆಗಳಿಗೆ ಆಜ್ಯಾಹುತಿಯನ್ನು ಕೊಡಬೇಕು.

26. ಹುತ್ವಾಗ್ನಿಂ ತರ್ಪಯೇದ್ವಿದ್ವಾನ್ ಪಿತೃಭ್ಯಶ್ಚ ಪ್ರಕಲ್ಪಯೇತ್।
ತತಃ ಶೇಷಂ ವಿಧಾನೇನ ಶುಚಿರ್ಭುಂಜೀತ ವಾಗ್ಯತಃ॥

ಪಿತೃಗಳಿಗೆ ತರ್ಪಣ ಕೊಟ್ಟು ಶುಚಿಯಾಗಿ ಶೇಷಾನ್ನವನ್ನು ಮೌನವಾಗಿ ಭುಂಜಿಸಬೇಕು.

27. ಕೃಚ್ಛ್ರಾಣಾ ಮೇಷ ಸರ್ವೇಷಾಂ ವಿಧಿರುಕ್ತೋಽನುಪೂರ್ವಶಃ।
ಪ್ರಾಜಾಪತ್ಯಾತಿಕೃಚ್ಛ್ರಸ್ಯ ತಥಾ ಸಾಂತಪನಸ್ಯ ಚ॥

28. ಪರಾಕಸ್ಯ ಚ ಕೃಚ್ಛ್ರಸ್ಯ ವಿಧಿಂ ಚಾಂದ್ರಾಯಣಸ್ಯ ಚ।
ಏಕೇನ ಶುದ್ಧಿಮಾಪ್ನೋತಿ ದ್ವಾಭ್ಯಾಂ ಪಾಪೈಃ ಪ್ರಮುಚ್ಯತೇ॥




29. ತ್ರಿಭಿಃ ಸಿಧ್ಯಂತಿ ಮಂತ್ರಾಶ್ಚ ಮುಚ್ಯತೇ ಚೋಪಪಾತಕೈಃ।
ಚತುರ್ಭಿರ್ಭ್ರೂಣಹತ್ಯಾಯಾ- ಸ್ತಥೈವಾಯಾಜ್ಯ ಯಾಜನಾತ್॥

30. ಪಂಚಭಿಃ ಪಾತಕೈಃ ಸರ್ವೈರ್ದುಷ್ಕೃತೈಶ್ಚ ಪ್ರಮುಚ್ಯತೇ।
ತಪ್ತಕೃಚ್ಛ್ರೇಣ ಸರ್ವಾಣಿ ಪಾಪಾನಿ ಪ್ರತಿಭಾಧತೇ॥

ಪ್ರಾಜಾಪತ್ಯ, ಕೃಚ್ಛ್ರ, ಅತಿಕೃಚ್ಛ್ರ, ಸಾಂತಪನ, ಪರಾಕ, ಚಾಂದ್ರಾಯಣ ಇತ್ಯಾದಿ ಪ್ರಾಯಶ್ಚಿತ್ತ ವಿಧಿಗಳು ಹೇಳಲ್ಪಟ್ಟಿವೆ.

ಒಂದರ ಆಚರಣೆಯಿಂದ ಶುದ್ಧನಾಗುತ್ತಾನೆ. ಎರಡರಿಂದ ಪಾಪಮುಕ್ತನಾಗುತ್ತಾನೆ. ಮೂರರಿಂದ ಮಂತ್ರಸಿದ್ಧಿಯುಳ್ಳವ ನಾಗುತ್ತಾನೆ. ನಾಲ್ಕರಿಂದ ಭ್ರೂಣಹತ್ಯಾದಿ ಪಾಪಮುಕ್ತನೂ ಆಗುತ್ತಾನೆ. ಐದರಿಂದ ಎಲ್ಲ ಮಹಾಪಾತಕಗಳಿಂದಲೂ ಮುಕ್ತನಾಗುತ್ತಾನೆ.

31. ಚಾಂದ್ರಾಯಣಂ ಸಹಾದ್ಯಂತಮೇಭಿ ಕೃಚ್ಛ್ರೈಃ ಸಮಸ್ಮೃತಂ।
ತ್ರಿಭಿಶ್ಚಾಂದ್ರಾಯಣೈಃ ಪೂತೋಬ್ರಹ್ಮಲೋಕಂ ಸಮಶ್ನುತೇ॥

ಮೂರು ಚಾಂದ್ರಾಯಣದ ಆಚರಣೆಯಿಂದ ಶುದ್ಧನಾಗಿ ಬ್ರಹ್ಮಲೋಕ ಹೊಂದುವನು.

32. ಅಷ್ಟಾಭಿರ್ದೇವತಾಃ ಸಾಕ್ಷಾತ್ ಪಶ್ಯೇತ ವರದಾಸ್ತಥಾ।
ಛಂದಾಂಸಿ ದಶಭಿರ್ಜ್ಞಾತ್ವಾ ಸರ್ವಾನ್ ಕಾಮಾನ್ ಸಮಶ್ನುತೇ॥

ಎಂಟು ಚಾಂದ್ರಾಯಣದಿಂದ ದೈವಸಾಕ್ಷಾತ್ಕಾರವೂ, ವರಪ್ರಾಪ್ತಿಯೂ ಉಂಟಾಗುವುದು. ಹತ್ತರಿಂದ ಛಂದೋ(ವೇದ) ಜ್ಞಾನವುಂಟಾಗಿ ಸರ್ವಕಾಮ ಪೂರ್ಣನಾಗುವನು.

33. ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಂ।
ತ್ರ್ಯಹಂ ಪರಂ ಚ ನಾಶ್ನೀಯಾತ್ ಪ್ರಾಜಾಪತ್ಯಂ ಚರನ್ ದ್ವಿಜಃ॥

ಪ್ರಾಜಾಪತ್ಯ ಆಚರಿಸುವವನು ಮೂರು ದಿನ ಪ್ರಾತಃಕಾಲ, ಮೂರು ದಿನ ಸಾಯಂಕಾಲ ಮಾತ್ರಉಣ್ಣಬೇಕು. ಮತ್ತೆ 3 ದಿನ ಉಪವಾಸವಿರಬೇಕು.

34. ಏಕೈಕಂ ಗ್ರಾಸಮಶ್ನೀಯಾತ್ ತ್ರ್ಯಹಾನಿ ತ್ರೀಣಿ ಪೂರ್ವವತ್।
ತ್ರ್ಯಹಂ ಚೋಪವಸೇದಂತ್ಯ-ಮತಿಕೃಚ್ಛ್ರಂ ಚರನ್ ದ್ವಿಜಃ॥

ಅತಿಕೃಚ್ಛ್ರ ಆಚರಿಸುವವನು ಒಂದೊಂದು ತುತ್ತನ್ನು ಹಿಂದೆ ಹೇಳಿದ ಕ್ರಮದಂತೆ ಮೂರು ಮೂರು ದಿನ ತಿನ್ನಬೇಕು. ನಂತರ 3 ದಿನ ಉಪವಾಸವಿರಬೇಕು.

35. ಅಮಾವಾಸ್ಯಾಂ ನ ಭುಂಜೀತ ಹ್ಯೇಷ ಚಾಂದ್ರಾಯಣೋ ವಿಧಿಃ ।
ಕುಕ್ಕುಟಾಂಡ ಪ್ರಮಾಣಂ ತು ಗ್ರಾಸಂ ಕುರ್ಯಾದತಂದ್ರಿತಃ॥

ಚಾಂದ್ರಾಯಣ ಆಚರಿಸುವವನು ಅಮಾವಾಸ್ಯೆಯಲ್ಲಿ ಉಪವಾಸವಿದ್ದು ಬಾಕಿ ದಿನಗಳಲ್ಲಿ ಕೋಳಿಮೊಟ್ಟೆ ಪ್ರಮಾಣದ ತುತ್ತನ್ನು ತಿನ್ನಬೇಕು.

36. ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಃ ಕುಶೋದಕಂ।
ಏಕರಾತ್ರೋಪವಾಸಶ್ಚ ಕೃಚ್ಛ್ರಃ ಸಾಂತಪನಃ ಸ್ಮೃತಃ॥

37. ಏವಮೇತತ್ ತ್ರ್ಯಹೈರ್ಯುಕ್ತಂ ಮಹಾಸಾಂತಪನಂ ವಿದುಃ।
ಉಪವಾಸಸ್ತು ಸಪ್ತಾಹಂ ಶಿಶುಸಾಂತಪನಂ ಸ್ಮೃತಂ॥

ಕೃಚ್ಛ್ರ ಸಾಂತಪನವನ್ನು ಆಚರಿಸುವವನು ಪಂಚಗವ್ಯವನ್ನು ಮಾತ್ರ ಸ್ವೀಕರಿಸಿ ರಾತ್ರಿ ಉಪವಾಸ ಮಾಡಬೇಕು. ಈ ರೀತಿ ಮೂರು ದಿನ ಆಚರಿಸಿದರೆ ಮಹಾ ಸಾಂತಪನ ಎಂದು ಹೆಸರು. ಏಳು ದಿನ ಮಾಡಿದರೆ ಶಿಶು ಸಾಂತಪನ ಎನ್ನುತ್ತಾರೆ.

38. ತಪ್ತಕೃಚ್ಛ್ರಂ ಚರನ್ ವಿಪ್ರೋ ಜಲಕ್ಷೀರ ಘೃತಾನಿಲಾನ್।
ಪ್ರತಿತ್ರ್ಯಹಂ ಪಿಬೇದುಷ್ಣಾನ್ ಸಕೃತ್ ಸ್ನಾಯೀ ಸಮಾಹಿತಃ॥

ತಪ್ತಕೃಚ್ಛ್ರವನ್ನು ಆಚರಿಸುವವನು 3 ದಿನ ಕಾಯಿಸಿದ ನೀರು, 3 ದಿನ ಬಿಸಿ ಹಾಲು, 3 ದಿನ ಕೇವಲ ವಾಯುವನ್ನು, 3 ದಿನ ಬಿಸಿತುಪ್ಪವನ್ನು ಸೇವಿಸುತ್ತಾ ಇರಬೇಕು. ''ಯತಿಕೃಚ್ಛ್ರ''ದಲ್ಲಿ ಕೇವಲ ನೀರನ್ನು ಸೇವಿಸಬೇಕು.



shrinath.udupa@gmail.com



39. ನಿಯತಸ್ತು ಪಿಬೇದಾಪಃ ಪ್ರಾಜಾಪತ್ಯ ವಿಧಿಃ ಸ್ಮೃತಃ।
ಯತಿಕೃಚ್ಛ್ರಂವದಂತ್ಯೇತ- ದ್ರಹಸಾ ಮಪನೋದನಂ॥

ಕೇವಲ ನೀರನ್ನು ಸೇವಿಸುವುದು 'ಯತಿಕೃಚ್ಛ್ರ' ಎನಿಸುತ್ತದೆ.

40. ಯತಾತ್ಮನೋಽ ಪ್ರಮತ್ತಸ್ಯ ದ್ವಾದಶಾಹಮಭೋಜನಂ ।
ಪರಾಕೋ ನಾಮ ಕೃಚ್ಛ್ರೋಽಯಂ ಸರ್ವ ಪಾಪ ಪ್ರಣೋದನಃ॥

ಪರಾಕವನ್ನು ಆಚರಿಸುವವನು ಜಿತೇಂದ್ರಿಯನಾಗಿ ಹನ್ನೆರಡು ದಿನ ಉಪವಾಸ ಇರಬೇಕು.

41. ಏಕೈಕಂ ಹ್ರಾಸಯೇತ್ ಪಿಂಡಂ ಕೃಷ್ಣೇ ಶುಕ್ಲೇ ಚ ವರ್ಧಯೇತ್।
ಉಪಸ್ಪೃಶಂ ಸ್ತ್ರಿಷವಣ - ಮೇತಚ್ಚಾಂದ್ರಾಯಣಂ ಸ್ಮೃತಂ॥

42. ಏತಮೇವ ವಿಧಿಂ ಕೃತ್ಸ್ನ - ಮಾಚರೇದ್ಯವ ಮಧ್ಯಮೇ।
ಶುಕ್ಲಪಕ್ಷಾದಿ ನಿಯತ - ಶ್ಚರಂಶ್ಚಾಂದ್ರಾಯಣವ್ರತಂ ॥

43. ಚತುರಃ ಪ್ರಾತರಶ್ನೀಯಾತ್ ವಿಪ್ರಃ ಪಿಂಡಾನ್ ಕೃತಾಹ್ನಿಕಃ ।
ಚತುರೋಽಸ್ತಮಿತೇ ಸೂರ್ಯೇ ಶಿಶು ಚಾಂದ್ರಾಯಣಂ ಸ್ಮೃತಂ ॥

44. ಅಷ್ಟಾವಷ್ಟೌ ಸಮಶ್ನೀಯಾತ್ ಪಿಂಡಾನ್ ಮಧ್ಯಂದಿನೇ ಸ್ಥಿತೇ ।
ನಿಯತಾತ್ಮಾ ಹವಿಷ್ಯಸ್ಯ ಯತಿ ಚಂದ್ರಾಯಣವ್ರತಂ ॥

'ಚಾಂದ್ರಾಯಣ'ವ್ರತದಲ್ಲಿ ಶುಕ್ಲಪಕ್ಷದಲ್ಲಿ ಪ್ರತಿದಿನ ಒಂದೊಂದು ತುತ್ತನ್ನು ಹೆಚ್ಚು ಮಾಡಿ ತಿನ್ನಬೇಕು. ಅಂತೆಯೇ ಕೃಷ್ಣಪಕ್ಷದಲ್ಲಿ ಒಂದೊಂದು ತುತ್ತನ್ನು ಕಡಿಮೆಮಾಡಬೇಕು. 3 ಕಾಲದಲ್ಲೂ ಸ್ನಾನ ಮಾಡಬೇಕು. 'ಶಿಶುಚಾಂದ್ರಾಯಣ'ವನ್ನು ಆಚರಿಸುವವನು ಬೆಳಿಗ್ಗೆ ನಾಲ್ಕು ಮತ್ತು ಸಾಯಂಕಾಲ ನಾಲ್ಕು ತುತ್ತನ್ನು ತಿನ್ನಬೇಕು. ಮಧ್ಯಾಹ್ನ ಎಂಟು ತುತ್ತುಗಳನ್ನು ಮಾತ್ರ ತಿಂದರೆ ''ಯತಿ ಚಾಂದ್ರಾಯಣ'' ಎನಿಸುತ್ತದೆ.

45. ಯಥಾಕಥಂ ಚಿತ್ ಪಿಂಡಾನಾಂ ತಿಸ್ರೋಽಶೀತೀಃ ಸ ಮಾಹಿತಃ ।
ಮಾಸೇನಾಶ್ನನ್ ಹವಿಷ್ಯಸ್ಯ ಚಂದ್ರಸ್ಯೈತಿ ಸಲೋಕತಾಂ ॥

ಒಂದು ಮಾಸದಲ್ಲಿ ಒಟ್ಟು 240 ತುತ್ತನ್ನು ಮಾತ್ರ ತಿನ್ನುವವನು ಕಡೆಯಲ್ಲಿ ಚಂದ್ರಲೋಕವನ್ನೇ ಹೊಂದುತ್ತಾನೆ.

46. ಏತದ್ರುದ್ರಾಸ್ತಥಾದಿತ್ಯಾ ವಸವಶ್ಚಾಚರನ್ ವ್ರತಂ ।
ಸರ್ವೇ ಕುಶಲ-ಮೋಕ್ಷಾಯ ಮರುತಶ್ಚರ್ತುಭಿಃ ಸಹ ॥

ಈ ವ್ರತಗಳನ್ನು ರುದ್ರರು, ಆದಿತ್ಯರು, ವಸುಗಳು, ಮರುತ್ತುಗಳೂ, ಋತುಗಳೂ ಆಚರಿಸಿದ್ದಾರೆ.

47. ಯಾವಕಃ ಸಪ್ತರಾತ್ರೇಣ ಪಾತವ್ಯೋ ನಿಯತಾತ್ಮನಾ ।
ಸ್ನಾನಾಸನ ತ್ರಿಷವಣೈಃ ಜಪತಾ ಪಾವಮಾನ್ಯೃಚಃ ॥

48. ಏಕೈಕಂ ಸಪ್ತರಾತ್ರೇಣ ಪುನಾತಿ ವಿಧಿವತ್ ಕೃತಃ ।
ತ್ವಗಸೃಕ್‌ಪಿಶಿತಾಸ್ಥೀನಿ ಮೇದೋ ಮಜ್ಜಾನ ಮೇವ ಚ ॥

49. ಏಕೈಕಂ ಸಪ್ತರಾತ್ರಂ ತು ತ್ವಗಾದೀನಾಂ ವಿಶೋಧನಂ ।
ಏಭಿರ್ವ್ರತೈರ್ವಿಪೂತಾತ್ಮಾ ಕುರ್ಯಾತ್ ಕರ್ಮಾಣ್ಯತಂದ್ರಿತಃ ॥

ಪವಮಾನ ಮಂತ್ರಗಳನ್ನು ಜಪಿಸುತ್ತಾ (ಏಳು ರಾತ್ರಿಗಳಲ್ಲಿ) ಬಂದರೆ ಒಂದೊಂದು ರಾತ್ರಿಯಲ್ಲೂ ಚರ, ರಕ್ತ, ಮಾಂಸ, ಮೂಳೆ, ಮೇದಸ್ಸು, ಮಜ್ಜಾದಿಗಳು ಶುದ್ಧವಾಗುತ್ತವೆ.

50. ಇಷ್ಯನ್ ಕಾಮಾಂಸ್ತತಃ ಸರ್ವಾನವಾಪ್ನೋತಿ ನ ಸಂಶಯಃ ।
ಕಣಪಿಣ್ಯಾಕತ ಕ್ರಾಣಾ - ಮೇಕೈಕಃ ಶೋಧನಂ ಭವೇತ್ ॥

ಹೀಗೆ ಕಣಕಣವೂ ಶುದ್ಧನಾದವನು ಕರ್ಮವನ್ನಾಚರಿಸಿದರೆ ಸರ್ವಫಲವನ್ನು ಹೊಂದುತ್ತಾನೆ.

51. ಶುದ್ಧಾತ್ಮಾ ಕರ್ಮ ಕುರ್ವೀತ ಸತ್ಯವಾದೀ ಜಿತೇಂದ್ರಿಯಃ ।
ಏವಂ ಶುದ್ಧಸ್ಯ ಕರ್ಮಾಣಿ ಮಂತ್ರೈರ್ವಕ್ಷ್ಯಾಮಿ ತದ್ಯಥಾ ॥

ಕರ್ಮ ಮಾಡುವವನು ಸತ್ಯವಾದಿಯೂ, ಜಿತೇಂದ್ರಿಯನೂ ಆಗಿರಬೇಕು.


shrinath.udupa@gmail.com

52. ತ್ರಿರಾತ್ರಮೇವೋಪವಸೇ - ದಾದಿತಃ ಸರ್ವಕರ್ಮಣಾಂ ।
ತ್ರೀಣಿ ಸಕ್ತಾನಿ ವಾ ಕುರಾತ್ ತತಃ ಕರ್ಮ ಸಮಾರಭೇತ್ ॥

ಎಲ್ಲಾ ಕರ್ಮಗಳಲ್ಲೂ ಮೊದಲು ಮೂರು ರಾತ್ರಿ ಉಪವಾಸವಿದ್ದು ಕರ್ಮ ಪ್ರಾರಂಭಿಸಬೇಕು.

53. ನಿತ್ಯ ಪ್ರಯೋಗಿಣಾಂ ಚೈವ ಪ್ರಯೋಗಾದೌ ವ್ರತಂ ತ್ರ್ಯಹಂ ।
ಉಪರಿಷ್ಟಾದುಪವಸೇತ್ ಕತ್ವಾ ವಾಸಾಂ ನಿಪಾತಿಕಂ ॥

54. ಆಯುಷ್ಯಾಣ್ಯೇವ ಕರ್ಮಾಣಿ ಮಂತ್ರಯುಕ್ತಃ ಸಮಾರಭೇತ್ ।
ಶಂವತ್ಯಃ ಸ್ವಸ್ತಿಮತ್ಯಶ್ಚ ಜಪೇತ ತ್ರಿವೃತಾ ಋಚಃ ॥

ಎಲ್ಲ ಕರ್ಮಗಳಲ್ಲೂ ಮೂರು ಸಲ ಶಂವತೀ, ಸ್ವಸ್ತಿಗಳನ್ನು ಜಪಿಸಬೇಕು.

55. ಅರಣ್ಯೇವೋದಿತೇ ಸೂರ್ಯೇ ದಿಶಂ ಪ್ರಾಪ್ಯಾಪರಾಜಿತಾಂ ।
ಪ್ರಾಚೀಮಥೋತ್ತರಾಂ ವಾಪಿ ಶುಚೌ ದೇಶೇ ಸಮಾಹಿತಃ ॥

56. ಸವಾಸಾಃ ಸಶಿರಸ್ಕೋಪ್ಸು ಸ್ನಾತ್ವಾಭ್ಯುಕ್ಷ್ಯ ಜಪೇತ್ ದ್ವಿಜಃ ।
ಶುದ್ಧವತ್ಯಸ್ತಥಾಂಬ್ವತ್ಯಃ ಪಾವಮಾನ್ಯೋಘರ್ಷಣಂ ॥

57. ಏವಂ ತ್ರಿರಾಪ್ಲುತ್ಯ ಶುಚಿಃ ಪ್ರಾಣಾಯಾಮಾನ್ ಸಮಾಚರೇತ್।
ತ್ರೀನ್ ಷಡಷ್ಟೌ ದ್ವಾದಶ ವಾ ಷೋಡಶಾಷ್ಟಾದಶಾಪಿ ವಾ ॥

58. ಆಶತಾದ್ವಾಯಮೇತ್ ಪ್ರಾಣಾನ್ ಜಪನ್‌ಬ್ರಹ್ಮಾಘಮರ್ಷಣಂ।
ಯಾವದ್ವಾಮನಸಸ್ತುಷ್ಟಿ-ಸ್ತಾವತ್ ಪ್ರಾಣಾನ್ ಸಮಾಯಮೇತ್॥

ಕಾಡಿನಲ್ಲಿ ಸೂರ್ಯೋದಯದಲ್ಲಿ ಈಶಾನ್ಯ ದಿಕ್ಕಿಗೆ ಅಥವಾ ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿ ಶುಚಿಪ್ರದೇಶದಲ್ಲಿ ಶುದ್ಧನಾಗಿ ಆಪೋಹಿಷ್ಠಾ ಪವಮಾನ, ಅಘಮರ್ಷಣ ಸೂಕ್ತಗಳನ್ನು ಪಠಿಸಬೇಕು.

ಈ ರೀತಿ ಮೂರು ಕಾಲಗಳಲ್ಲಿ ಸ್ನಾನ ಮಾಡಿ 3,6,8,12,16,18 ಅಥವಾ 100 ಪ್ರಾಣಾಯಾಮಗಳನ್ನು (ಯಥಾಶಕ್ತಿ) ಮಾಡುತ್ತಾ 'ಅಘಮರ್ಷಣ'ವನ್ನು ಜಪಿಸಬೇಕು. ಹೀಗೆ ಮನಸ್ಸು ಸಂತೋಷಗೊಳ್ಳುವವರೆಗೆ ಮಾಡಬೇಕು.

59. ಯಥಾತಥಾ ಮನಸ್ತಸ್ಯ ದುಷ್ಕೃತಂ ಕರ್ಮ ಗರ್ಹತಿ ।
ತಥಾತಥಾ ಶರೀರಂ ತತ್ತೇ - ನಾಧರ್ಮೇಣ ಮುಚ್ಯತೇ ॥

ಹೀಗೆ ಮಾಡುತ್ತಿದ್ದರೆ ಪಾಪಕರ್ಮಗಳಿಂದ, ಅಧರ್ಮದಿಂದ ಬಿಡಲ್ಪಡುತ್ತಾನೆ.

60. ಪ್ರಾಣಾಯಾಮೈರ್ದಗ್ಧದೋಷಃ ಶುಕ್ಲಾಂಬರಧರಃ ಶುಚಿ ।
ಯಥಾವಿಧ್ಯೆವ ಆಚಮ್ಯಾ ಆರೋಹೇದ್ದರ್ಭ ಪ್ರಸ್ತರಂ ॥

61. ಪವಿತ್ರ ಪಾಣಿಃ ಕೃತ್ವಾ ತೂಪಸ್ಥಂ ವೈ ದಕ್ಷಿಣೋತ್ತರಂ ।
ದಿಶೋರೇವಾಂತರಂ ಪ್ರೇಕ್ಷ್ಯಾನಿಮಿಷಂ ಛಾದ್ಯ ಚಕ್ಷುಷೀ ॥

ಪ್ರಾಣಾಯಾಮದಿಂದ ದೋಷನಾಶವಾಗುತ್ತದೆ. ಹೀಗೆ ಮಾಡಿ ಶುದ್ಧನಾಗಿ ಆಚಮನ ಮಾಡಿ ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು. ಪವಿತ್ರ ಧಾರಣೆ ಮಾಡಿ ಎಡಗಾಲ ಮೇಲೆ ಬಲಗಾಲನ್ನು ಸ್ಥಾಪಿಸಿ ಕುಳಿತುಕೊಳ್ಳಬೇಕು. ನೆಟ್ಟಗೆ ದೃಷ್ಟಿಯುಳ್ಳವನಾಗಬೇಕು.

62. ಓಂಕಾರಂ ವ್ಯಾಹೃತೀಸ್ತಿಸ್ರಃ ಸಾವಿತ್ರೀಂ ಚ ತದಿತ್ಯೃಚಂ ।
ಮನಸೈತಾ ಅನುದ್ರುತ್ಯ ವೇದಾದಿಂ ಸಮುಪಕ್ರಮೇತ್ ॥

ಓಂಕಾರ, ವ್ಯಾಹೃತಿ, ಸಾವಿತ್ರೀ ಮಂತ್ರದೊಂದಿಗೆ ವೇದವನ್ನು ಪ್ರಾರಂಭಿಸಬೇಕು.

63. ಮಂದ್ರಮೇವ ಪಠೇತ್ ಪ್ರಾತ-ರುಚ್ಚೈರ್ಮಧ್ಯಂದಿನೇ ಪಠೇತ್ ।
ಸೋಚ್ಚೈರೇವಾಪರಾಹ್ಣೇ ತು ಸಂಧ್ಯಾಕಾಲ ಉಪಾರಮೇತ್ ॥

ಬೆಳಿಗ್ಗೆ ಮಂದ್ರ ಸ್ವರದಲ್ಲೂ, ಮಧ್ಯಾಹ್ನ ಮಧ್ಯಮ ಸ್ವರದಲ್ಲೂ, ಅಪರಾಹ್ನದಲ್ಲಿ ಉಚ್ಚ ಸ್ವರದಲ್ಲೂ, ಪಠಿಸಿ ಸಂಧ್ಯಾಕಾಲದಲ್ಲಿ ವಿರಮಿಸಬೇಕು.

64. ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ತ್ರಿರಾಪ್ಲುತ್ಯಪಠೇತ್ ದ್ವಿಜಃ ।
ಮಧ್ಯಮಾಂ ವೃತ್ತಿಮಾಸ್ಥಾಯ ನ ದ್ರುತಾಂ ನ ವಿಲಂಬಿತಾಂ ॥

ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಸ್ನಾನ ಮಾಡಿ ಪಠಿಸಬೇಕು. ಅತ್ಯಂತ ವೇಗದಲ್ಲೂ ಅತೀ ನಿಧಾನವಾಗಿಯೂ ಪಠಿಸಬಾರದು.


shrinath.udupa@gmail.com

65. ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇ-ದುಪಾಸೀತ ಚ ಪಶ್ಚಿಮಾಂ ।
ನ ಚಾಂತರಾ ವ್ಯಾಹರೇತ ವಿರಮೇದ್ವಾ ಕಥಂಚನ ॥

ಬೆಳಗಿನ ಸಂಧ್ಯಾವಂದನೆಯನ್ನು ನಿಂತೂ, ಸಂಜೆ ಕುಳಿತೂ ಉಪಾಸಿಸಬೇಕು.

66. ವಿರಮೇದ್ ಬ್ರಾಹ್ಮಣೇ ಪ್ರಾಪ್ತೇ ಕಾಮಂ ತೇನ ತು ಸಂವದೇತ್ ।
ಶೂದ್ರಂ ದೃಷ್ಟ್ವೈವ ಸಂಪ್ರಾಪ್ತಂ ನಾಧೀಯೀತ ಕಥಂಚನ ॥

ಅಧ್ಯಯನ ಕಾಲದಲ್ಲಿ ಬ್ರಾಹ್ಮಣನು ಬಂದರೆ ಮಾತನಾಡಬಹುದು. ಶೂದ್ರನು ಬಂದರೆ ಅಧ್ಯಯನ ಮಾಡಬಾರದು.

67. ಆಗ್ನೇಯಂ ಸೂಕ್ತಮಾದ್ಯಂತು ಮುಖ್ಯಂ ಬ್ರಹ್ಮರ್ಷಿ ಸಂಮತಂ ।
ರಾಯಸ್ಪೋಷಂ ಧುರು ಧನ್ಯಂ ಜಪನ್ ವಿಪ್ರೋರ್ಥಮಾಪ್ನುಯಾತ್ ॥

68. ಋಷಿಂ ಸರ್ವಮಿದಂ ಜಪ್ತ್ವಾ ಸಪುತ್ರಂ ನಿಯತಃ ಶುಚಿಃ ।
ಸಂಹಿತಾಫಲಮಾಪ್ನೋತಿ ಋಗ್ವೇದಸ್ಯ ನ ಸಂಶಯಃ ॥

69. ಏಕಾದಶ ಗುಣಂ ಹ್ಯೇತತ್ ಜಪನ್ ಬ್ರಹ್ಮ ಸನಾತನಂ ।
ಸರ್ವಾನ್ ಕಾಮಾನವಾಪ್ನೋತಿ ಪಾಪೈಶ್ಚ ಪರಿಮುಚ್ಯತೇ॥

70. ಅನಶ್ನನ್ ಸಂಹಿತಾಮೇತಾಂ ಪ್ರಾತಃ ಪ್ರಾತರ್ದಿನೇ ದಿನೇ ।
ಆಯುರ್ವಿದ್ಯಾಂ ಧನಂ ಪುತ್ರಾನ್ ಗೃಹಾಂಶ್ಚಾಪ್ನೋತ್ಯ
ನಾಮಯಾನ್ ॥

ಅಗ್ನಿಮೀಳೆ ಎಂಬ ಅಗ್ನಿಸೂಕ್ತವನ್ನು ಜಪಿಸುವವನು ಧನಧಾನ್ಯವನ್ನು ಪಡೆಯುವನು. ಋಗ್ವೇದ ಸಂಹಿತೆಯ ಪಠಣದ ಫಲವನ್ನೇ ಪಡೆಯುತ್ತಾನೆ. ಹನ್ನೊಂದು ಸಲ ಜಪಿಸಿದರೆ ಎಲ್ಲ ಕಾಮಗಳೂ ಸಿದ್ಧಿಸಿ ಪಾಪಮುಕ್ತನಾಗುತ್ತಾನೆ. ಪ್ರತಿದಿನ ನಿರಾಹಾರನಾಗಿ ಜಪಿಸಿದರೆ ಆಯುಸ್ಸು, ವಿದ್ಯೆ, ಧನ, ಪುತ್ರ, ಗೃಹ ಪ್ರಾಪ್ತಿಯಾಗುತ್ತದೆ.

71. ಏತದ್ ಬ್ರಹ್ಮ ಜಪನ್ ಶೂದ್ರಾ- ನ್ನೇಕ್ಷೇತಾನ್ಯಾಂಶ್ಚ ತದ್ವಿಧಾನ್।
ಪ್ರೇಕ್ಷ್ಯಾ ಚಮ್ಯೋದಕಂ ಪೂತಃ ಪಶ್ಯೇದ್ ಗಾಮಗ್ನಿಭಾಸ್ಕರೌ॥

ಇದನ್ನು ಜಪಿಸುವಾಗ ಶೂದ್ರನನ್ನು ನೋಡಿದರೆ ಆಚಮನ ಮಾಡಿ, ಸ್ನಾನ ಮಾಡಿ ಹಸುವನ್ನು, ಸೂರ್ಯನನ್ನೂ ನೋಡಬೇಕು.

72. ಮಂದ್ರಂ ಜಪೋ ದಶಗುಣ ಉಪಾಂಶು ಸ್ಯಾಚ್ಛತಾನ್ವಿತಃ ।
ಸಹಸ್ರಂ ಮಾನಸಂ ವಿದ್ಯಾ-ದೇಷ ಜಪ್ಯ ವಿಧಿಃ ಸ್ಮೃತಃ ॥

ಮಂದ್ರಧ್ವನಿಯಲ್ಲಿ ಜಪಮಾಡಿದರೆ ಹತ್ತುಪಟ್ಟು ಫಲವೂ, ಉಪಾಂಶು ಧ್ವನಿಯಲ್ಲಿಮಾಡಿದರೆ ನೂರು ಪಟ್ಟುಫಲವೂ, ಮಾನಸಿಕವಾಗಿ ಮಾಡಿದರೆ ಸಹಸ್ರಪಟ್ಟೂ ಲಭಿಸುತ್ತದೆ.

73. ಆದಾವೇವ ತು ಸಾವಿತ್ರ್ಯಾ ಕರ್ಮ ಕುರ್ವೀತ ಶಾಂತಯೇ ।
ಪುಷ್ಟಯೇ ಧನಲಾಭಾಯ ಪಶುಕಾಮಾಯ ಭೂತಯೇ ॥

ಮೊದಲು ಶಾಂತಿಗಾಗಿ, ಪುಷ್ಟಿಗಾಗಿ, ಧನ, ಪಶು ಪ್ರಾಪ್ತಿಗಾಗಿ ಸಾವಿತ್ರಿಯಿಂದ ಕರ್ಮ ಪ್ರಾರಂಭಿಸಬೇಕು.

74. ಏಷಾ ಹಿ ಸಂಹಿತಾ ದೇವ್ಯೈಃ ಸರ್ವ ಬ್ರಹ್ಮಮಯೀ ನಿಚೃತ್।
ಉಗ್ರೇಣ ತಪಸಾ ದೃಷ್ಟ್ವಾ ವಿಶ್ವಾಮಿತ್ರೇಣಧೀಮತಾ ॥

ಈ ಸಾವಿತ್ರೀ ಮಂತ್ರವು ಸರ್ವವೇದದ ಸಾರವಾಗಿದ್ದು ವಿಶ್ವಾಮಿತ್ರನಿಂದ ದರ್ಶಿಸಲ್ಪಟ್ಟಿತು.

75. ಹೋಮಾಂಶ್ಚ ಜಪಯಜ್ಞಾಂಶ್ಚ ನಿತ್ಯಂ ಕುರ್ವೀತ ಚೈತಯಾ।
ಸರ್ವಕಾಮ ಸಮೃದ್ಧ್ಯರ್ಥಂ ಪರಬ್ರಹ್ಮೇದಮುಚ್ಯತೇ ॥

ಈ ಮಂತ್ರದಿಂದ ನಿತ್ಯ ಜಪ, ಹೋಮ, ಯಜ್ಞಗಳನ್ನು ಮಾಡಬೇಕು. ಎಲ್ಲವನ್ನೂ ಇದು ಅನುಗ್ರಹಿಸುವುದರಿಂದ 'ಪರಬ್ರಹ್ಮ' ಎಂದು ಹೇಳಲ್ಪಡುತ್ತದೆ.

76. ಏಷೈವ ಪ್ರತಿಲೋಮೋಕ್ತಾ-ಪಚ್ಛಃ ಶತ್ರುವಿನಾಶಿನೀ ।
ಅಕ್ಷರ ಪ್ರತಿಲೋಮೇಯುಮಾಭಿಚಾರೇಷು ಶಸ್ಯತೇ ॥

ಈ ಮಂತ್ರವನ್ನು 'ಪ್ರತಿಲೋಮ' ಕ್ರಮದಿಂದ (ಪಾದಗಳನ್ನು) ಜಪಿಸಿದರೆ


shrinath.udupa@gmail.com

ಸರ್ವಶತ್ರುನಾಶವಾಗುತ್ತದೆ. ಅಭಿಚಾರಗಳಲ್ಲಿ ಈ ಮಂತ್ರದ ಅಕ್ಷರಗಳನ್ನು ಪ್ರತಿಲೋಮವಾಗಿ ಪಠಿಸಬೇಕು.

77. ಅಕ್ಷರ ಪ್ರತಿಲೋಮೇಯಂ ಯಸ್ಮಿನ್ ಯುಜ್ಯೇತ ಕರ್ಮಣಿ ।
ತದಮೋಘಂ ವಿಜಾನೀಯಾದೇತದ್ವ್ಮ ಬ್ರಹ್ಮಣೋ ಬಲಂ ॥

78. ವ್ಯಾಘಾತಕೇದ್ಮ ಸಮಿಧೋ-ಹ್ಯಕ್ಷರ ಪ್ರತಿಲೋಮಯಾ ।
ಜುಹುಯಾತ್ ಸಾರ್ಷಪಂ ತೈಲಂ ಬೈಭೀತಕ ಕೃತಸ್ರುಚಃ ॥

79. ಯ ಇಚ್ಛೇತ್ ಪೀಡನಂ ಶತ್ರೋ-ರಪಿವೋಚ್ಚಾಟನಂ ಪುನಃ।
ಪಚ್ಛಃ ಸಂಪೀಡಯೇಚ್ಛತ್ರೂನ್ ವರ್ಣಶಶ್ಚ ಪ್ರಮಾಪಯೇತ್॥

ಅಕ್ಷರ ಪ್ರತಿಲೋಮ ಪಠಣದಿಂದ ಬ್ರಹ್ಮಶಕ್ತಿ ಪ್ರಾಪ್ತವಾಗುತ್ತದೆ. ತಾವರೆ ಗಿಡ ಉಪಯೋಗಿಸಿ ಮಾಡಿದ ಸ್ರುಚದಲ್ಲಿ ಸಾಸಿವೆ ಎಣ್ಣೆಯಿಂದ ಹೋಮಮಾಡಿದರೆ ಸರ್ವಶತ್ರು ಉಚ್ಚಾಟನೆಯಾಗುತ್ತದೆ.

80. ಋಗ್ವೇದಾದ್ಯಕ್ಯ ಸೂಕ್ತಸ್ಯ ವಿಧಿಂ ವಕ್ಷ್ಯಾಮ್ಯತಃ ಪರಂ ।
ಯಥಾ ಋಷಿರ್ಮಧುಚ್ಛಂಧಾಃ ಕರ್ಮ ತೇನಾಕರೋತ್ ಪುರಾ॥

ಋಗ್ವೇದದ ಮೊದಲನೇ ಸೂಕ್ತದ ವಿಧಿಯನ್ನು ಈಗ ಹೇಳುತ್ತೇನೆ. ಮಧುಚ್ಛಂದಾ ಋಷಿಯು ಈ ಮಂತ್ರಗಳಿಂದ ಕರ್ಮ ಮಾಡಿರುತ್ತಾನೆ.

81. ಶಿರಸಾ ಧಾರಯೇದಗ್ನಿಂ ನಿಯತಃ ಪರಿವತ್ಸರಂ ।
ಚತುರ್ಥಪ್ರಾಣ ಕಾಲೀಯೋ ಹುತಶಿಷ್ಟಮದನ್ ಹವಿಃ ॥

82. ಜಹೂಂ ತ್ರಿರುಪತಿಷ್ಠಂಶ್ಚ ಸತ್ಯವಾದೀ ದಿನೇದಿನೇ ।
ವ್ರತಕಾಲೇತು ಸಂಪ್ರಾಪ್ತೇ ಆಗ್ನೇಯಂ ನಿರ್ವಪೇಚ್ಚರುಂ ॥

83. ಅನಗ್ನೋ ಧ್ಯಾನಮಾತ್ರೋಗ್ನಿ-ರ್ವ್ರತಾಂತೇಸ್ಯೋಪತಿಷ್ಠತಿ ।
ದಹೇಯಮಿತಿ ಯ ಚೇಚ್ಛೇ- ತ್ತಂ ದಹತ್ಯೇವ ಪಾವಕಃ ॥

84. ಅಪ್ಸ್ವಪ್ಯಗ್ನಿರ್ಜ್ವಲತ್ಯೇವ ತದ್ ವ್ರತಸ್ಯ ಮಹಾತ್ಮನಃ ।

ಸಮರ್ಧಯತಿ ತಂಚೇಷ್ಟೈಃ ಕಾಮೈರ್ವರ್ಷೈಃ ಪ್ರಯತ್ನತಃ ॥

ನಿಯಮಿತವಾಗಿ ಒಂದು ವರ್ಷ ಅಗ್ನಿ ರಕ್ಷಣೆ ಮಾಡಿ. ಹುತಶೇಷವನ್ನು ತಿನ್ನುತ್ತಾ, ಸತ್ಯವಾದಿಯಾಗಿ, ವ್ರತ ಮಾಡಿದರೆ ಯಾವ ವಸ್ತುವನ್ನಾದರೂ ಭಸ್ಮ ಮಾಡುವ ಶಕ್ತಿ ಲಭಿಸುತ್ತದೆ. ನೀರಿನಲ್ಲೂ ಅಗ್ನಿಜ್ವಲನೆ ಮಾಡುವ ಶಕ್ತಿ ಬರುತ್ತದೆ. ಎಲ್ಲ ಕಾಮಗಳೂ ಸಿದ್ಧಿಸುತ್ತವೆ.

85. ಅತಃ ಪರಂ ತೃಚಾಃ ಸಪ್ತ ವಾಯ್ವಾದ್ಯಾ ಯೇಪ್ರಕೀರ್ತಿತಾಃ ।
ತಾನ್ ಜಪನ್ ಪ್ರಯತೋ ನಿತ್ಯ-ಮಿಷ್ಟಾನ್ ಕಾಮಾನ್ ಸಮಶ್ನುತೇ ॥

ನಂತರದ 21 ವಾಯು, ಇಂದ್ರ ಇತ್ಯಾದಿ ದೇವತಾ ಮಂತ್ರಗಳನ್ನು ಜಪಿಸುವವನು ಎಲ್ಲ ಕಾಮಗಳನ್ನು ಪಡೆಯುತ್ತಾನೆ. (ವಾಯುವಾಯಾಹಿ ಎಂದು ಪ್ರಾರಂಭವಾಗುವ ಮಂತ್ರಗಳು)

86. ಮೇಧಾತಿಥಾವೃಷೌ ಪುನಃ ಸದಸಸ್ಪತಿಮಿತ್ಯೃಚಂ ।
ಮೇಧಾಕಾಮೋ ಜಪೇನ್ನಿತ್ಯಂ ಜುಹುಯಾಚ್ಚಾಜ್ಯ ಮೇತಯಾ॥

ಮೇಧಾತಿಥಿ ಋಷಿವೃಷ್ಟ "ಸದಸಸ್ಪತಿ" ಎಂಬ ಮಂತ್ರ ಜಪ ಮತ್ತು ಹೋಮ "ಮೇಧಾಕಾಮ"ನಿಗೆ ಹೇಳಲ್ಪಟ್ಟಿದೆ.

87. ಸ್ಯೋನೇತಿ ಪೃಥಿವೀ ನಿತ್ಯಂ ಸಾತ್ವಾ ವಿಪ್ರಃ ಶುಚಿರ್ಜಪೇತ್।
ವಿಂದತೇ ಮಹತೀಂ ಭೂಮಿಮಸಪತ್ನಾಮಕಂಟಕಾಂ ॥

'ಸ್ಯೋನಾ ಪೃಥಿವೀ' ಎಂಬ ಮಂತ್ರವನ್ನು ಶುಚಿಯಾಗಿ ನಿತ್ಯವೂ ಜಪಮಾಡುವವನಿಗೆ ಒಳ್ಳೆಯ ಫಲವತ್ತಾದ ಭೂ ಲಾಭವಾಗುತ್ತದೆ.

88. ಇದಂ ವಿಷ್ಣುರಿತೀಮಾಭಿಃ ಪಂಚಭಿಃ ಶ್ರಾದ್ಧಕರ್ಮಣಿ ।
ಅಂಗುಷ್ಠ ಮನ್ನೇ ವಗಾಹ್ಯೇತ್ತೇನ ರಕ್ಷಾಂಸಿ ಬಾಧತೇ ॥

89. ಅಂಗುಷ್ಠ ಮಾತ್ರೋ ಭಗವಾನ್ ವಿಷ್ಣುಃ ಪರ್ಯಟತೇ ಮಹೀಂ ।
ರಾಕ್ಷಸಾನಾಂ ವಧಾರ್ಥಾಯ ತಚ್ಛ್ರಾದ್ಧೇ ಪ್ರಹರಿಷ್ಯತಿ ॥




90. ಅಕ್ಷಯ್ಯಂಚ ಭವೇದನ್ನಂ ಶ್ರದ್ಧಾಭಕ್ತಿ ಸಮನ್ವಿತಂ ।
ತಸ್ಮಾಚ್ಛ್ರಾದ್ಧೇಷು ಸರ್ವೇಷ್ವ- ಪ್ಯಂಗುಷ್ಠಂ ಗ್ರಹಣಂ ಸ್ಮೃತಂ ॥

'ಇದಂ ವಿಷ್ಣು' ಮೊದಲಾದ 5 ಮಂತ್ರಗಳನ್ನು ಶ್ರಾದ್ಧದಲ್ಲಿ ಅನ್ನವನ್ನು ಅಂಗುಷ್ಠದಿಂದ ಸ್ಪರ್ಶಿಸುತ್ತಾ ಪಠಿಸುವವನಿಗೆ ರಾಕ್ಷಸ ಬಾಧೆ ಉಂಟಾಗುವುದಿಲ್ಲ. ಅನ್ನವೂ ಅಕ್ಷಯವಾಗುತ್ತದೆ. ರಾಕ್ಷಸರ ವಧೆಗಾಗಿ ವಿಷ್ಣುವು ಅಂಗುಷ್ಠ ಮಾತ್ರನಾಗಿ ಭೂಮಿಯನ್ನು ಪರ್ಯಟನ ಮಾಡುತ್ತಾನೆ.

91. ಸಪ್ತ ಜನ್ಮ ಕೃತಂ ಪಾಪಂ ಕೃತ್ವಾಚಾಭಕ್ಷ್ಯಭಕ್ಷಣಂ ।
ತದ್ವಿಷ್ಣೋರಿತ್ಯಪಾಂ ಮಧ್ಯೇ ಸಕೃಜ್ಜಪ್ತ್ವಾ ವಿಶುಧ್ಯತಿ ॥

ಏಳು ಜನ್ಮಗಳಲ್ಲಿ ಮಾಡಿದ ಪಾಪವೂ ಅಭಕ್ಷ್ಯ ಭಕ್ಷಣ ದೋಷವೂ, ನೀರಿನಲ್ಲಿ 'ತದ್ವಿಷ್ಣೋಃ' ಎಂಬ ಮಂತ್ರದ ಜಪದಿಂದ ನಾಶವಾಗುತ್ತದೆ.

92. ಅಂಬಯೋ ಯಂತಿ ಯಾಃ ಪ್ರೋಕ್ತಾ ನವರ್ಚ ಸ್ತ್ವಾಭಿಷೇಚನೀಃ ।
ಆಯುಷ್ಯಸ್ತಾಃ ಪರಿಪ್ರೋಕ್ತಾ ಭೈಷಜ್ಯಃ ಪಾಪಮೋಚನೀಃ ॥

"ಅಂಬಯೋ ಯಂತಿ" ಮೊದಲಾದ ಮಂತ್ರಗಳು ಅಭಿಷೇಕ (ಸ್ನಾನ)ದಲ್ಲಿ ಪಠಿಸಿದರೆ ಆಯುಸ್ಸು, ಆರೋಗ್ಯವನ್ನು ಕೊಡುತ್ತವೆ.

93. ಶುನಃ ಶೇಪಮೃಷಿಂ ಬದ್ಧಃ ಸಂನಿರುದ್ಧೋಥ ವಾ ಜಪೇತ್ ।
ಮುಚ್ಯತೇ ಸರ್ವ ಪಾಪೇಭ್ಯೋ ಗದೀ ಚಾಪ್ಯಗದೋ ಭವೇತ್ ॥

ಶುನಃ ಶೇಪ ಋಷಿಯ "ಕಸ್ಯನೂನಂ" ಇತ್ಯಾದಿ ಮಂತ್ರಗಳನ್ನು ಜಪಿಸುವವನು ಬಂಧಮುಕ್ತನಾಗಿ, ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

94. ಯ ಇಚ್ಛೇಚ್ಛಾಶ್ವತಾನ್ ಕಾಮಾ -ನಿಂದ್ರಾತ್ ಪ್ರಾಪ್ತುಂಪುರಂದರಾತ್ ।
ಸ ಷೋಡಶಿಭಿರೇವರ್ಗ್ಭಿ - ರಿಂದ್ರಂ ಸ್ತುಯಾದ್ದಿನೇದಿನೇ ॥

"ಆವ ಇಂದ್ರಂ" ಮೊದಲಾದ 16 ಮಂತ್ರಗಳಿಂದ ಇಂದ್ರನನ್ನು ಸ್ತುತಿಸುವವನು ಸರ್ವಕಾಮನೆಗಳನ್ನು ಪಡೆಯುತ್ತಾನೆ.

95. ಹೈರಣ್ಯಸ್ತೂಪ ಇಂದ್ರಸ್ಯ ಸೂಕ್ತಂ ಕರ್ಮಾಭಿಸಂಸ್ತವಂ ।
ತಜ್ಜಪನ್ ಪ್ರಯತಃ ಶತ್ರೂ - ನಯತ್ನಾನ್ ಪ್ರತಿಬಾಧ್ಯತೇ ॥

ಹಿರಣ್ಯ ಸ್ತೂಪ ಋಷಿಯ 'ತ್ವಮಗ್ನೇ ಪ್ರಥಮ' ಸೂಕ್ತವನ್ನು ಜಪಿಸುವವನಿಗೆ ಸರ್ವಶತ್ರುತ್ವ ನಿವಾರಣೆಯಾಗುತ್ತದೆ.

96. ಆ ಕೃಷ್ಣೇನೇತ್ಯೃಚಾತ್ವೇವ ಯೋ ನಿತ್ಯಂ ಸೂರ್ಯಮರ್ಚತಿ ।
ಪ್ರಾತರ್ಮಧ್ಯೇಽ ಸ್ತಗಂ ವಾಪಿ ಸ ಜೀವೇದಗತಃ ಸುಖೀ ॥

97. ಆ ಕೃಷ್ಣೇನೇತ್ಯೃಚಂ ತ್ವೇತಾಂ ಧ್ಯಾಯನ್ನಿಶಿ ದಿವಾಕಸಃ ।
ಅಗ್ನೌ ಹುತ್ವೈತಯಾ ಚಾಜ್ಯಂ ದೀರ್ಘ ಮಾಯುರವಾಪ್ನುಯಾತ್ ॥

'ಆಕೃಷ್ಣೇನ' ಮಂತ್ರವನ್ನು ಪ್ರತಿನಿತ್ಯ ಮೂರು ಕಾಲಗಳಲ್ಲಿ ಜಪಿಸುವವನು. ಸರ್ವಪಾಪಗಳಿಂದ ಮುಕ್ತನಾಗಿ ಸುಖಿಯಾಗಿರುತ್ತಾನೆ. ಇದೇ ಮಂತ್ರದಿಂದ ಸೂರ್ಯನನ್ನು ಧ್ಯಾನಿಸುತ್ತಾ ಅಗ್ನಿಯಲ್ಲಿ ಆಜ್ಯದಿಂದ ಹೋಮ ಮಾಡಿದರೆ ದೀರ್ಘಾಯುವನ್ನು ಪಡೆಯುತ್ತಾನೆ.

98. ಯೇ ತೇ ಪಂಥಾ ಇತೀಮಾಂ ತು ಸಾವಿತ್ರೀ ಮಧ್ಯಗೋಽ ಭ್ಯಸೇತ್ ।
ಸ್ವಸ್ತಿಮಾನ್ ವ್ರಜತೇಽ ಧ್ವಾನಂ ಗೃಹಾಂಶ್ಚಾಪ್ನೋತ್ಯನಾಮಯಾನ್॥

'ಯೇತೇ ಪಂಥಾಃ' ಮಂತ್ರದಿಂದ ಸವಿತೃದೇವತೆಯನ್ನು ಪೂಜಿಸುವವನಿಗೆ ಪ್ರಯಾಣಕಾಲದಲ್ಲಿ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ ಒಳ್ಳೆಯ ಮನೆಯನ್ನು ಪಡೆಯುತ್ತಾನೆ.

99. ಸಂ ಪೂಷನ್ನಿತಿ ಯತ್ ಸೂಕ್ತಂ ಘೌರಃ ಕಣ್ವೋ ಜಗಾವೃಷಿಃ।
ಅಧ್ವನ್ಯಮೇತದ್ವಿಜ್ಞೇಯಂ ಪರಿಪಂಥ್ಯಪಸೇಧನಂ॥

ಕಣ್ವ ಋಷಿಯ 'ಸಂಪೂಷನ್' ಸೂಕ್ತವನ್ನು ಪ್ರಯಾಣ ಕಾಲದಲ್ಲಿ ಜಪಿಸುವವನು ಯಾವುದೇ ಕಂಟಕಗಳಿಲ್ಲದೆ ಗುರಿ ಮುಟ್ಟುತ್ತಾನೆ.

100. ರೌದ್ರೀಭಿಃ ಷಡ್ಭಿರೀಶಾನಂ ತುಷ್ಟೂಯಾದ್ಯೋ ದಿನೇ ದಿನೇ।
ಸ ನಾರೀ ಸಹಿತಃ ಶಾಂತಿಂ ಶಂಕರಾತ್ ಪ್ರಾಪ್ನುಯಾತ್ ಸದಾ॥




101. ಏತೇನೈವ ಷಡರ್ಚೇನ ಜುಹುಯಾದಾಜ್ಯಮನ್ವಹಂ ।
ಚರುಂ ಚ ಕಲ್ಪಯೇದ್ರೌದ್ರಂ ಭೂತಿಕಾಮೋಥ ಪರ್ವಸು ॥

'ಕದ್ರುದ್ರಾಯ' ಎಂಬಿತ್ಯಾದಿ 6 ಮಂತ್ರಗಳನ್ನು ಯಾರು ಪ್ರತಿನಿತ್ಯವೂ ಪಠಿಸುತ್ತಾರೋ ಅವರ ಕುಟುಂಬದಲ್ಲಿ ಸದಾ ಶಾಂತಿಯು ನೆಲೆಸಿರುತ್ತದೆ ಇವೇ ಮಂತ್ರಗಳಿಂದ ಪ್ರತಿ ಪರ್ವದಲ್ಲಿ ಯಾರು ಅಗ್ನಿಗೆ ಚರು, ಆಜ್ಯಗಳ ಆಹುತಿಯನ್ನು ಕೊಡುತ್ತಾನೋ ಅವನಿಗೆ ರುದ್ರನು ಐಶ್ವರ್ಯವನ್ನು ದಯಪಾಲಿಸುತ್ತಾನೆ.

102. ಉದಿತ್ಯುದ್ಯಂತಮಾದಿತ್ಯಂ - ಮುಪತಿಷ್ಠೇದ್ದಿನೇ ದಿನೇ ।
ಹೃದ್ರೋಗನಾಶನಂ ಹ್ಯೇತತ್ ಪರಮಾರೋಗ್ಯವರ್ಧನಂ ॥

ಸೂರ್ಯೋದಯ ಕಾಲದಲ್ಲಿ ಯಾರು ಪ್ರತಿನಿತ್ಯವೂ 'ಉದುತ್ಯಂ' ಮಂತ್ರವನ್ನು ಜಪಿಸುತ್ತಾರೋ, ಅಂತಹವರಿಗೆ ಹೃದ್ರೋಗ ಬಾಧೆಯಿರುವುದಿಲ್ಲ ಮತ್ತು ಆರೋಗ್ಯ ವರ್ಧನೆಯಾಗುತ್ತದೆ.

103. ದ್ವಿಷಂತಮಿತ್ಯರ್ಧಾರ್ಧರ್ಚಂ ಯಂ ದ್ವಿಷ್ಯಾತ್ತಂ ಜಪನ್ ಸ್ಮರೇತ್ ।
ಆಗಸ್ಕೃತ್ ಸಪ್ತರಾತ್ರೇಣ ವಿದ್ವೇಷಮಭಿಗಚ್ಛತಿ ॥

'ದ್ವಿಷಂತಂ...' ಎಂಬ ಅರ್ಧ ಋಕ್ಕನ್ನು ಯಾವನು ಜಪಿಸುತ್ತಾನೋ ಅವನಿಗೆ ಏಳು ರಾತ್ರಿಗಳಲ್ಲಿ ವಿದ್ವೇಷವು ನಾಶವಾಗುತ್ತದೆ.

104. ರೋಗೈರ್ಗೃಹೀತೋ ರೋಗೀ ಚ ಪ್ರಸ್ಕಣ್ವಸ್ಯೋತ್ತಮಂ ತೃಚಂ ।
ಆರೋಗ್ಯಮೇತತ್ ಪ್ರಯತೋ ಜಪೇನ್ನಿತ್ಯಮನೇಕಶಃ ॥

'ಉದ್ಯನ್ನದ್ಯ' ಇತ್ಯಾದಿ ಮೂರು ಮಂತ್ರಗಳನ್ನು ಜಪಿಸುವ ರೋಗಿಗೆ ರೋಗಶಮನ ಆಗುತ್ತದೆ.

105. ಉತ್ತಮಸ್ಯಾಸ್ಯ ಚಾರ್ಧರ್ಚೋ ದ್ವಿಷದ್ ದ್ವೇಷ ಇತಿ ಸ್ಮೃತಃ ।
ಯಂ ದ್ವಿಷ್ಯಾತ್ತಮಭಿಧ್ಯಾಯೇದ್ ದೃಷ್ಟ್ವಾ ಚೈನಂ ಜಪೇದಿದಂ ॥

106. ಆಗಸ್ಕೃಚ್ಚೇತ್ ತ್ರಿರಾತ್ರೇಣ ವಿದ್ವೇಷಂ ಸನ್ನಿಯಚ್ಛತಿ ।
ಉದಯತ್ಯಾಯುರಕ್ಷಯ್ಯಂ ತೇಜೋ ಮಧ್ಯಂದಿನೇ ಜಪನ್ ॥

107.ಅಸ್ತಂ ವ್ರಜತಿ ಸೂರ್ಯೇ ತು ದ್ವಿಷಂತಂ ಪ್ರತಿಬಾಧತೇ ।
ಓಜಸ್ತೇಜಸ್ತಥಾರೋಗ್ಯಂ ದ್ವಿಷದ್ ದ್ವೇಷಂ ಪ್ರಕೀರ್ತಿತಂ ॥

'ದ್ವಿಷಂತಂ...' ಎಂಬ ಮಂತ್ರಾರ್ಧವನ್ನು ಜಪಿಸುವವನಿಗೆ 3 ರಾತ್ರಿಗಳಲ್ಲಿ ವಿದ್ವೇಷಶಮನವಾಗುತ್ತದೆ. ಮಧ್ಯಾಹ್ನದಲ್ಲಿ ಇದನ್ನು ಜಪಿಸುವವನಿಗೆ ತೇಜಸ್ಸು, ಆಯುಸ್ಸು ವೃದ್ಧಿಯಾಗುತ್ತದೆ. ಸಾಯಂಕಾಲದಲ್ಲಿ 'ಜಪಿಸುವವನ ಓಜಸ್ಸು, ಆಯುಸ್ಸು ವೃದ್ಧಿಸಿ ಸರ್ವ ಶತ್ರುದ್ವೇಷನಾಶವಾಗುತ್ತದೆ.

108.ನವ ಪಶ್ವೇತಿ ಸೂಕ್ತಾನಿ ಯಾನಿ ಗರ್ಭೇ ಪರಾಶರಃ ।
ಅರಾತೀನಾಂ ಹರೇತ್ಪ್ರಾಣಾನ್ ಛತ್ರೂಂಶ್ಚೈವ ನಿಯಚ್ಛತಿ ॥

ಪರಾಶರ ಋಷಿಯ 'ಪಶ್ವಾ ನ ತಾಯುಂ' ಎಂಬ 9 ಸೂಕ್ತಗಳು ಶತ್ರುನಾಶಕ ಮಂತ್ರಗಳು.

109.ಸೌಪರ್ಣಾನಿ ಪವಿತ್ರಾಣಿ ಸೂಕ್ತಾನ್ಯೇಕಾದಶಾಭ್ಯಸೇತ್ ।
ವಾಂಛನ್ ಪುತ್ರಾನ್ ಪಶೂನ್ ವಿತ್ತಂ ಸ್ವರ್ಗಮಾಯುರನಂಧತಾಂ ॥

ಸುಪರ್ಣ ಋಷಿಯ 11 ಸೂಕ್ತಗಳು ಸಂತತಿ ಪಶು ಧನ ಸ್ವರ್ಗದಾಯಕಗಳು.

110.ಆಧ್ಯಾತ್ಮಿಕೀಃ ಕ ಇತ್ಯೇತಾ ಜಪಂಸ್ತು ಸುಸಮಾಹಿತಃ ।
ಪ್ರಾಪ್ನುಯಾತ್ ಸ ಪರಂಧಾಮ ವಿಶ್ವಂ ಜ್ಯೋತಿಃ ಸನಾತನಂ॥

'ಕೋ ಆದ್ಯ' ಇತ್ಯಾದಿ 5 ಮಂತ್ರಗಳು ಆಧ್ಯಾತ್ಮಿಕ. ಇದರ ಜಪದಿಂದ ಮೋಕ್ಷ ಪ್ರಾಪ್ತಿ.

111.ಆನೋಭದ್ರೀಯಮಾಯುಷ್ಯಂ ವೈಶ್ವದೇವಂ ಜಪನ್ ಮುನಿಃ।
ಮುಮೂರ್ಷುರಪಿ ಜಪ್ತ್ವೈತ-ದ್ದೀರ್ಘಮಾಯುರವಾಪ್ನುಯಾತ್॥

ದೀರ್ಘಾಯುಷ್ಯಕ್ಕಾಗಿ 'ಆನೋಭದ್ರಾ...' ಸೂಕ್ತವನ್ನು ಪಠಿಸಬೇಕು.

112. ಪಿತೄಣಾಂ ಶ್ರಾದ್ಧಕಾಲೇ ತು ಮಧ್ವಿತ್ಯೇತತ್ತ್ಯೃಚಂ ಪಠೇತ್ ।
ಅಘೋರಾಃ ಪಿತರಸ್ತಸ್ಯ ವಿಶಂತಿ ಜ್ಯೋತಿರುತ್ತಮಂ ॥




ಶ್ರಾದ್ಧ ಕಾಲದಲ್ಲಿ 'ಮಧುವಾತಾ... ' ಇತ್ಯಾದಿ 3 ಮಂತ್ರಗಳನ್ನು ಪಠಿಸಿದರೆ ಪಿತೃಗಳಿಗೆ ಉತ್ತಮ ಲೋಕ ಪ್ರಾಪ್ತವಾಗುತ್ತದೆ.

113.ತ್ವಂ ಸೋಮೇತಿ ಚ ಸೂಕ್ತೇನ ಪಶ್ಯೇಚ್ಚಂದ್ರಮುಪೋದಿತಂ ।
ಉಪತಿಷ್ಠೇತ್ ಸಮಿತ್ಪಾಣಿ - ರ್ಮಾಸಿಮಾಸಿ ನವಂ ನವಂ॥

114.ತನ್ಮಾಸಂ ತಸ್ಯ ದುಃಖಂ ಹಿ ನ ಜಾತು ತ್ರಿವಿಧಂ ಭವೇತ್।
ಗೌತಮೇನ ಪುರಾದೃಷ್ಟಂ ಮೃತ್ಯೋರ್ನಾಶನಮಾತ್ಮನಃ ॥

115.ಉದ್ಯಂತಮುಪತಿಷ್ಠೇತ ಪೂರ್ಣೇ ಚೈತತ್ ಸಮಾಹಿತಃ ।
ವಾಸಾಂಸ್ಯಪಿ ಸ ವಿಂದೇತ ಚಂದ್ರಸ್ಯೈತಿ ಸಲೋಕತಾಂ ॥

116.ಧನಕಾಮೋ ಜಪೇನಿತ್ಯ - ಮೇತಾ ಇತಿ ತು ನಿತ್ಯಶಃ ।
ಸ್ನಾತ್ವಾ ಶುಚಿಸ್ತು ನಿಯತ ಇಷ್ಟಂ ಧನಮವಾಪ್ನುಯಾತ್ ॥

'ತ್ವಂ ಸೋಮ...' ಸೂಕ್ತವನ್ನು ಸಮಿತ್ಪಾಣಿಯಾಗಿ ಪೂರ್ಣಚಂದ್ರನನ್ನು ನೋಡುತ್ತಾ ಪ್ರತಿ ತಿಂಗಳೂ ಪಠಿಸಿದರೆ ಅವನಿಗೆ ಮೂರು ವಿಧವಾದ ದುಃಖಗಳು ಬಾಧಿಸುವುದಿಲ್ಲ. ಹುಣ್ಣಿಮೆಯ ಚಂದ್ರೋದಯ ಕಾಲದಲ್ಲಿ ಇದನ್ನು ಜಪಿಸಿದವನು ಚಂದ್ರಲೋಕವನ್ನೇ ಸೇರುತ್ತಾನೆ. ಧನ ಪ್ರಾಪ್ತಿಗಾಗಿ ದಿನವೂ ಇದನ್ನು ಜಪಿಸಬೇಕು.

117.ಆಯುರೀಪ್ಸನ್ನಿ ಮಮಿತಿ ಕೌತ್ಸಂ ಸೂಕ್ತಂ ಸದಾಭ್ಯಸೇತ್।
ಆಜ್ಯಾಹುತೀಶ್ಚ ಜುಹುಯಾತ್ ಪ್ರತ್ಯೃಚಂ ವಾಗ್ಯತಃ ಶುಚಿಃ ॥

'ಇಮಂ ಸ್ತೋಮಂ...' ಸೂಕ್ತದ ಮಂತ್ರಗಳಿಂದ ಅಗ್ನಿಗೆ ಆಜ್ಯಾಹುತಿಗಳನ್ನು ಕೊಟ್ಟರೆ ಆಯುಸ್ಸು ವೃದ್ಧಿಯಾಗುತ್ತದೆ.

118.ಜಪೇದಾಪ್ಲುತ್ಯ ನಿಯತಃ ಸ ಸಾಕ್ಷಾದಾಪದಂ ತರೇತ್ ।
ಅಪನಃ ಶೋಶುಚದಿತಿ ಸ್ನಾತ್ವಾ ಮಧ್ಯಂದಿನೇ ರವೌ ॥

119.ಶುಚಿಕಾಮೋ ಜಿತಾಹಾರಃ ಪ್ರತ್ಯೃಚಂ ಜುಹುಯಾದ್ ಘೃತಂ।
ಸಮಿಧೋಽನ್ವಹಮಿಷ್ಟ್ವಾ ವಾ ಸೂಕ್ತಮೇತದಘಾಪಹಂ ॥

'ಅಪನಃ...' ಸೂಕ್ತವನ್ನು ಮಧ್ಯಾಹ್ನ ಕಾಲದಲ್ಲಿ ಜಪಿಸಿದರೆ ಸರ್ವ ಕಷ್ಟ ನಿವಾರಣೆಯಾಗುತ್ತದೆ. ಈ ಮಂತ್ರಗಳಿಂದ ಹೋಮ ಮಾಡಿದರೆ ಸರ್ವ ಪಾಪಶಮನವಾಗುತ್ತದೆ.

120. ಯಥಾ ಮುಂಜಾದಿವೇಷೀಕಾ ತಥಾ ಪಾಪ್ಮ್ಯಾ ಪ್ರಮುಚ್ಯತೇ।
ಜಾತವೇದಸ ಇತ್ಯಾದಿ ಸದಾ ಸ್ವಸ್ತ್ಯಯನೇ ಜಪೇತ್ ॥

121. ದುರ್ಗೇ ಪಥಿ ಪ್ರಯಾತಸ್ಯ ನಾಸ್ಯಾರಿಭ್ಯೋ ಭಯಂ ಭವೇತ್।
ರಾಜಕಾರ್ಯೇಷ್ವಯೂಥೇವಾ ಅಭಿಶಸ್ತೋಽಪ್ಯನೇಕಧಾ ॥

122. ಅಶಕ್ತೋಽಪ್ರತಿಭಾ ಕಾರ್ಯೇ ಭಯೇ ಪ್ರಾಣಾಂತಿಕೇಽಥ ವಾ।
ಜಾತವೇದಸ ಇತ್ಯೇತಾಂ ಜಪಂಸ್ತೇಭ್ಯಃ ಪ್ರಮುಚ್ಯತೇ ॥

123. ನಿಷಾಧಯಿಷುರರ್ಥಂ ತು ಪ್ರಸ್ಥಿತೋ ಮನಸಾ ಜಪೇತ್ ।
ಸಿದ್ಧಾರ್ಥಃ ಸ್ವಸ್ತಿಮಾನೇತಿ ಪ್ರಮೀಯೇತ ನ ಚಾಧ್ವನಿ ॥

124. ಕೃತಾರ್ಥಃ ಸ್ವಗೃಹಾನ್ ಗಚ್ಛ-ನ್ನೇತಾಮೇವ ಸದಾಭ್ಯಸೇತ್ ।
ಉದಿತೇ ಸವಿತರ್ಯೇತಾಂ ಜಪೇದಸ್ತಂಗತೇ ಸಥಾ ॥

125. ಅಹಃ ಸ್ವಸ್ತ್ಯಯನಂ ಪ್ರಾತಾ ರಾತ್ರಿಃ ಸ್ವಸ್ತ್ಯಯನಂ ನಿಶಿ।
ವ್ಯುಷ್ಟಾಯಾಂ ಚ ಜಪೇನ್ನಿತ್ಯ - ಮೇತಾಂ ದುಃಸ್ವಪ್ನನಾಶಿನೀಂ ॥

'ಜಾತವೇದಸೇ...' ಮಂತ್ರ ಜಪಮಾಡುವವನಿಗೆ ಎಂತಹ ದುರ್ಗಮ ಪ್ರದೇಶದ ಪ್ರಯಾಣವೂ ಸುಖಕರವಾಗಿರುತ್ತದೆ, ಶತ್ರುಗಳ ಭಯವೂ ಇರುವುದಿಲ್ಲ. ಅಶಕ್ತನಾದವನಿಗೂ, ಪ್ರತಿಭಾ ರಹಿತನಾದವನಿಗೂ, ಭಯಗ್ರಸ್ಥನಾದವನಿಗೂ ಈ ಮಂತ್ರ ಪ್ರಶಸ್ತವಾಗಿರುತ್ತದೆ. ಧನಕಾಮಿಯಾದವನು ಈ ಮಂತ್ರ ಜಪ ಮಾಡುತ್ತಾ ಹೊರಟರೆ ಧನ ಪ್ರಾಪ್ತಿಯಾಗುತ್ತದೆ. ಸೂರ್ಯೋದಯಾಸ್ತಗಳಲ್ಲಿ ಹಗಲು-ರಾತ್ರಿಗಳಲ್ಲಿ ಈ ಜಪ ಮಾಡುವುದರಿಂದ ಸರ್ವಕಾಲದಲ್ಲಿ ಮಂಗಳವಾಗುತ್ತದೆ. ದುಸ್ವಪ್ನಗಳೂ ನಾಶವಾಗುತ್ತದೆ.


shrinath.udupa@gmail.com


126. ಪ್ರಮಂದಿನೇ ಪ್ರಸೂಯಂತ್ಯಾಂ ಜಪೇದ್‌ಗರ್ಭಪ್ರಮೋಚನೀಂ।
ಇಂದ್ರಂ ಚ ಮನಸಾ ಧ್ಯಾಯೇ-ನ್ನಾರೀ ಗರ್ಭಂ ಪ್ರಮುಂಚತಿ॥

ಪ್ರಸವ ಕಾಲದಲ್ಲಿ ''ಪ್ರಮಂದಿನೇ'' ಮಂತ್ರವನ್ನು ಜಪಿಸಿದರೆ ಸುಖ ಪ್ರಸವವಾಗುತ್ತದೆ.

127. ಆಪತ್ಸು ಸರ್ವಕಾಮೋ ವಾ ತ್ರಿತಂ ನಿತ್ಯಂ ಜಪೇದೃಷಿಂ ।
ಜಪನ್ನಿಂದ್ರಮಿತಿ ಸ್ನಾತೋ ವೈಶ್ವದೇವಂ ತು ಸಪ್ತಕಂ ॥

''ಇಂದ್ರ ಮಿತ್ರಂ'' ಎಂಬ ವಿಶ್ವೇದೇವತಾ ಸಪ್ತ ಮಂತ್ರಗಳು ಸರ್ವಾಪನ್ನಿವೃತ್ತಿ ದಾಯಕಗಳೂ, ಸರ್ವಪಾಪನಾಶಕಗಳೂ ಆಗಿವೆ.

128. ಮುಚ್ಯತೇ ಜುಹುಯಾದಾಜ್ಯಂ ವಿಶ್ವಸ್ಮಾದೇವ ಸೋಽಂಹಸಃ ।
ಶಂತಾತೀಯಂ ಪರಂ ಸೂಕ್ತಂ ಪಂಚವಿಂಶಕಮುತ್ತಮಂ ॥

129. ನಾಸತ್ಯಾ ತು ನಮಸ್ಕೃತ್ಯ ಪರಾಮೃದ್ಧಿಮವಾಪ್ನುಯಾತ್ ।
ಘರ್ಮಸಂಸ್ತವನಂ ಸೂಕ್ತಂ ಸರ್ವಪಾಪೈಃ ಪ್ರಮುಚ್ಯತೇ ॥

''ಈಳೇ ದ್ಯಾವಾಪೃಥಿವೀ'' ಎಂಬ 25 ಮಂತ್ರಗಳ ಸೂಕ್ತವು ಸರ್ವವೃದ್ಧಿದಾಯಕವೂ ಸರ್ವಪಾಪನಾಶಕವೂ ಆಗಿರುತ್ತದೆ.

130. ಇಮಾ ಇತಿ ಜಪೇಚ್ಛಶ್ವದ್ರೌದ್ರಸೂಕ್ತಂ ದ್ವಿಜಃ ಶುಚಿಃ ।
ಆಯುರ್ವಿದ್ಯಾಂ ಧನಂ ಪುತ್ರಾನ್‌ಗೃಹಾಂಶ್ಚಾಪ್ನೋತ್ಯನಾಮಯಾನ್ ॥

131. ವೀತೇಷ್ವಪತ್ಯ ಗೋಷ್ಠೇಷು ದುಃಸ್ವಪ್ನೇತಿಪ್ರ ಮಾತ್ಮನಃ ।
ಮಾ ನೋ ಮಹಾಂತಮಿತ್ಯಾಭ್ಯಾಂ ತ್ರಿರಾತ್ರೋಪೋಷಿತಃ ಶುಚಿಃ ॥

132. ಔದುಂಬರೀಷ್ಟ ಜುಹುಯಾ-ದ್ದಧಿಮಧ್ವಾಜ್ಯ ಸಂಸ್ಕೃತಾಃ ।
ಸೂಕ್ತೇನ ಜುಹುಯಾದಾಜ್ಯ-ಮಾದಾವಂತೇ ಚ ಕರ್ಮಣಾಂ ॥

133. ಊರ್ಧ್ವಬಾಹುಸ್ತು ಸೂಕ್ತೇನ ತುಷ್ಟಾವ ಶತಶೋ ಭವಂ ।
ಛಿತ್ವಾ ಸರ್ವಾನ್ ಮೃತ್ಯುಪಾಶಾನ್‌ಜೀವೇದ್ರೋಗೈರ್ವಿವರ್ಜಿತಃ।

"ಇಮಾ ರುದ್ರಾಯ ತವಸೇ" ಎಂಬ ಸೂಕ್ತವನ್ನು ಜಪಿಸುವವನು ವಿದ್ಯೆ, ಧನ, ಗೃಹ, ಸಂತತಿಗಳನ್ನು ಪಡೆಯುತ್ತಾನೆ.

"ಮಾನೋ ಮಹಾಂತಂ" ಎಂಬ 2 ಮಂತ್ರಗಳನ್ನು 3 ರಾತ್ರಿ ಉಪವಾಸವಿದ್ದು ಜಪ ಮಾಡುವವನಿಗೆ ದುಃಸ್ವಪ್ನ ಬಾಧೆಯಿರುವುದಿಲ್ಲ. ಈ ಸೂಕ್ತದಿಂದ ತ್ರಿಮಧುಶ್ರಿತ ಔದುಂಬರ ಸಮಿತ್ತಿನಿಂದ ಹೋಮ ಮಾಡಿದರೆ ಸರ್ವ ರೋಗವೂ ನಿವಾರಣೆಯಾಗಿ ಮೃತ್ಯುಂಜಯನಾಗುತ್ತಾನೆ.

134.ತಿಷ್ಠನ್ನುದ್ಯಂತಮಾದಿತ್ಯಂ ಸಮಿತ್ ಪಾಣಿಃ ಶುಚಿಃ ಸದಾ।
ಚಿತ್ರಮಿತ್ಯುಪತಿಷ್ಠೇತ ಸೂಕ್ತೇನಾನೇನ ಭಾಸ್ಕರಂ ॥

135.ಅತಿ ಸ್ತವೇನ ಚೈತೇನ ನಿತ್ಯಂ ಮಧ್ಯಂದಿನೇ ರವಿಂ ।
ಗೃಣಾನೋಪೋಹತೇ ಕ್ಷಿಪ್ರಂ ಪ್ರಾಪ್ನೋತಿ ಚ ಧನಾಯುಷೀ ॥

"ಚಿತ್ರಂ ದೇವಾನಾಂ" ಸೂಕ್ತದಿಂದ ಸಮಿತ್ಪಾಣಿಯಾಗಿ ಸೂರ್ಯನನ್ನು ಜಪಿಸಿದರೆ ಆಯುಸ್ಸು, ಧನವೂ ವೃದ್ಧಿಯಾಗುತ್ತದೆ.

136.ಅಧಃಸ್ವಪ್ನಸ್ಯೇತಿ ಜಪೇತ್ ಪ್ರಾತಃ ಪ್ರಾತರ್ದಿನೇದಿನೇ ।
ದುಸ್ವಪ್ನಂ ನುದತೇ ಕ್ಷಿಪ್ರಂ ನ ಚಾಸ್ಯಾಭೋಜನಾದ್ ಭಯಂ॥

"ಅಧಃಸ್ವಪ್ನಸ್ಯ" ಎಂಬ ಮಂತ್ರದ ಜಪದಿಂದ ದುಃಸ್ವಪ್ನ ನಾಶವಾಗುತ್ತದೆ. ಅಭೋಜ್ಯ ಭೋಜನದಿಂದ ಯಾವುದೇ ತೊಂದರೆಯೂ ಉಂಟಾಗುವುದಿಲ್ಲ.

137.ಉಭೇ ಪುನಾಮೀತಿ ಪರಾ ರಿಪುಘ್ನ್ಯಸ್ತು ಪ್ರಕೀರ್ತಿತಾಃ ।
ತಾ ಜಪನ್ ಹಂತಿ ರಕ್ಷಾಂಸಿ ಸಪತ್ನಾಂಶ್ಚ ನಿಯಚ್ಛತಿ ॥

"ಉಭೇ ಪುನಾಮಿ" ಎಂಬ ಮಂತ್ರಗಳು ಶತ್ರು ನಾಶಕಗಳೂ, ರಾಕ್ಷಸ ನಾಶಕಗಳೂ ಆಗಿವೆ.

138.ನಿವರ್ತ್ಯ ಪಂಚಯಜ್ಞಾಂಶ್ಚ ಹುತ್ವಾ ಚಾಗ್ನಿಂ ಕೃತಾಹ್ನಿಕಃ ।
ಯೇ ದೇವಾಸೋ ದಿವ್ಯನಯಾ ಜಪನ್‌ಕಾಮಾನವಾಪ್ನುಯಾತ್।




ಪಂಚಯಜ್ಞಗಳನ್ನು ಮಾಡಿ "ಯೇ ದೇವಾಸೋ" ಮಂತ್ರದ ಜಪ ಮಾಡಿದರೆ ಸರ್ವ ಕಾಮನೆಗಳೂ ಸಿದ್ಧಿಸುತ್ತವೆ.

139.ಇಂದ್ರಾವಿಷ್ಣೂ ನಮಸ್ಕೃತ್ಯ ವಿಷ್ಣೋರ್ನುಕಮಿತಿ ತ್ರಿಭಿಃ ।
ಸಮಿತ್ ಪಾಣಿಃ ಶುಚಿರ್ಭೂತ್ವೋಪತಿಷ್ಠೇತ್ತು ದಿನೇದಿನೇ ॥

140.ಧರ್ಮಂ ಬುದ್ಧಿ ಧನು ಪುತ್ರಾ-ನಾರೋಗ್ಯಂ ಧರ್ಮವರ್ಧನಂ ।
ಪ್ರಾಪ್ನೋತಿ ಚ ಪರಂ ಸ್ಥಾನಂ ಜ್ಯೋತೀರೂಪಂ ಸನಾತನಂ ॥

"ವಿಷ್ಣೋರ್ನುಕಂ" ಎಂಬ 3 ಸೂಕ್ತಗಳ ಪಠಣವು ಧರ್ಮ ಬುದ್ಧಿಯನ್ನೂ, ಪುತ್ರ, ಧನ, ಆರೋಗ್ಯಾದಿಗಳನ್ನೂ, ಅವಸಾನಾನಂತರ ಉತ್ತಮ ಲೋಕವನ್ನೂ ಕೊಡುವುದು.

141.ಆತತಾಯಿನಮಾಯಾಂತಂ ದೃಷ್ಟ್ವಾ ವ್ಯಾಘ್ರಮಥೋ ವೃಕಂ ।
ನ ಮಾ ಗರನ್ನಿತಿ ಜಪಂ ಸ್ತೇಭ್ಯ ಏವ ಪ್ರಮುಚ್ಯತೇ ॥

ಕಳ್ಳಕಾಕರು, ಹುಲಿ, ತೋಳ ಮುಂತಾದ ದುಷ್ಟಪ್ರಾಣಿಗಳು ಎದುರಾದಾಗ "ನ ಮಾ ಗರನ್" ಮಂತ್ರವನ್ನು ಜಪಿಸಿದರೆ ಬಾಧೆಯಿರುವುದಿಲ್ಲ.

142.ತ್ರಿರಾತ್ರೋಪೋಷಿತೋ ರಾತ್ರೌ ಜಪೇದಾಸೂರ್ಯದರ್ಶನಾತ್ ।
ಅಪ್ಲುತ್ಯ ಪ್ರಯತಃ ಸೌರೀರುಪತಿಷ್ಠೇದ್ದಿವಾಕರಂ ॥

143.ಪಶ್ಯಂತಿ ತಸ್ಕರಾನ್ನೈನಂ ನ ಚಾನ್ಯೇ ಪಾಪವೃತಯಃ ।
ಏಕಶತಾನಿ ತ್ರಾಯೀತ ತಸ್ಕರೇಭ್ಯಶ್ಚರನ್ ಪಥಿ ॥

ಮೂರು ರಾತ್ರಿಯಲ್ಲಿ ಉಪವಾಸವಿದ್ದು, ಸೂರ್ಯೋದಯದವರೆಗೂ ಉಪಾಸನೆ ಮಾಡುವವನಿಗೆ ಕಳ್ಳರಿಂದ ಭಯವಿರುವುದಿಲ್ಲ. ಪಾಪವೃತ್ತಿಗಳೂ ಬಾಧಿಸುವುದಿಲ್ಲ. ನೂರು ಕಳ್ಳರಿಂದಲೂ ಭೀತಿಯಿರುವುದಿಲ್ಲ.

144.ಸ್ತೇಯಂ ಕೃತ್ವಾ ದ್ವಿಜೋ ಮೋಹಾ-ತ್ರಿರಾತ್ರೋಪೋಷಿತಃ ಶುಚಿಃ ।
ಸೂಕ್ತಂ ಜಪ್ತ್ವಾಸ್ಯವಾಮೀಯಂ ಕ್ಷಿಪ್ರಂ ಮುಚ್ಯೇತ ಕಿಲ್ಬಿಷಾತ್ ॥

145.ಜ್ಞಾತಿ ಪುತ್ರ ಸುಹೃನ್ಮಿತ್ರೈ-ರ್ಯಸ್ಯ ರಾಜ್ಯಂ ಚಿಕೀರ್ಷತಿ ।
ನಿತ್ಯಂ ಸ ನಿಯತೋ ಭೂತ್ವಾ ಸೂಕ್ತಂ ತು ಮನಸಾ ಜಪೇತ್॥

ಕಳ್ಳತನ ಮಾಡಿದ ದೋಷವು "ಅಸ್ಯವಾಮಸ್ಯ" ಸೂಕ್ತದ ಜಪದಿಂದ ನಾಶ ಹೊಂದುತ್ತದೆ. ಮೂರು ರಾತ್ರಿ ಉಪವಾಸ ಇದ್ದು ಇದನ್ನು ಜಪಿಸಿದರೆ ಸರ್ವಪಾಪಗಳಿಂದ ಬಿಡಲ್ಪಡುತ್ತಾನೆ. ರಾಜ್ಯಪ್ರಾಪ್ತಿಯೂ ಉಂಟಾಗುತ್ತದೆ.

146.ಕಯಾ ಶುಭೇತಿ ಪೈಶುನ್ಯಂ ಕೃತ್ವಾಚಾರ್ಯನೃಪದ್ವಿಜೈಃ ।
ಶ್ರುತ್ವಾ ಪರಂ ರಹಸ್ಯಂ ತು ಗುರೋರಪ್ಯಾಹ ಶೌನಕಃ ॥

ಆಚಾರ್ಯ, ಗುರು, ರಾಜ, ಬ್ರಾಹ್ಮಣರಲ್ಲಿ ಚಾಡಿಯನ್ನು ಹೇಳಿದ ದೋಷವು "ಕಯಾ ಶುಭಾ" ಸೂಕ್ತದ ಜಪದಿಂದ ನಾಶ ಹೊಂದುತ್ತದೆ.

147.ಇಮಂ ನು ಸೋಮಮಿತ್ಯೇತೇ ದ್ವೇ ಋಚೌ ಪ್ರಯತೋ ಜಪೇತ್ ।
ಸರ್ವಾನ್ ಕಾಮಾನವಾಪ್ನೋತಿ ನ ಕಿಂಚಿತ್ ಪಾತಕಂ ಭವೇತ್

ಸರ್ವಕಾಮ ಪ್ರಾಪ್ತಿ ಮತ್ತು ಪಾಪನಿವೃತ್ತಿಗಾಗಿ "ಇಮಂ ನು ಸೋಮಂ" ಮತ್ತು "ಅಗಸ್ತ್ಯಃ ಖನಮಾನಃ" ಎಂಬ 2 ಮಂತ್ರಗಳನ್ನು ಜಪಿಸಬೇಕು.

148.ಪಿತುಂ ನ್ವಿತ್ಯುಪತಿಷ್ಠೇತ ನಿತ್ಯಮನ್ನಮುಪಸ್ಥಿತಂ ।
ಪೂಜಯೇದಶನಂ ನಿತ್ಯಂ ಭುಂಜೀಯಾದವಿಕುತ್ಸಿತಂ ॥

149.ನಾಸ್ಯ ಸ್ಯಾದನ್ನಜೋ ವ್ಯಾಧಿರ್ವಿಷಮಪ್ಯನ್ನ ತಾಮಿಯಾತ್ ।
ವಿಷಂ ಚ ಪೀತ್ವೈತತ್ ಸೂಕ್ತಂ ಜಪೇತ ವಿಷನಾಶನಂ ॥

150.ನಾ ವಾಗ್ಯತಸ್ತು ಭುಂಜೀತ ನಾಶುಚಿರ್ನ ಜುಗುಪ್ಸಿತಂ ।
ದದ್ಯಾಚ್ಚ ಪೂಜಯೇಚ್ಚೈವ ಜುಹುಯಾಚ್ಚ ಶುಚಿಃ ಸದಾ ॥

151.ಕ್ಷುದ್ ಭಯಂ ನಾಸ್ಯ ಕಿಂಚಿತ್ ಸ್ಯಾ-ನ್ನಾನ್ನಜಂ ವ್ಯಾಧಿಮಾಪ್ನುಯಾತ್।
ಉತ್‌ಪಥಪ್ರತಿಪನ್ನೋ ಯೋ ಭ್ರಷ್ಟೋ ವಾಪಿ ಪಥಃ ಕ್ವಚಿತ್॥

"ಪಿತುಂ ನು ಸ್ತೋಷಂ" ಸೂಕ್ತದಿಂದ ನಿತ್ಯವೂ ಭೋಜನಕಾಲದಲ್ಲಿ ಅನ್ನವನ್ನು ಪ್ರಾರ್ಥಿಸುವವನಿಗೆ ಸರ್ವದಾ ಉತ್ತಮವಾದ ಆಹಾರವು




ದೊರಕುತ್ತದೆ. ಆಹಾರದಿಂದ ಯಾವ ದೋಷವು (ರೋಗವೂ) ಉಂಟಾಗುವುದಿಲ್ಲ ವಿಷವೂ ಅವನಿಗೆ ಅನ್ನವಾಗುತ್ತದೆ. ಮೌನಿಯಾಗಿ, ಶುಚಿಯಾಗಿ, ಶಾಂತಮನಸ್ಕನಾಗಿ ತಿನ್ನುವವನಿಗೆ ಯಾವ ವ್ಯಾಧಿಯೂ ಬರುವುದಿಲ್ಲ.

152. ಪಂಥಾನಂ ಪ್ರತಿಪದ್ಯೇತ ಕೃತ್ವಾ ವಾ ಕರ್ಮಗರ್ಹಿತಂ ।
ಅಗ್ನೇ ನಯೇತಿ ಸೂಕ್ತೇನ ಪ್ರತ್ಯೃಚಂ ಜುಹುಯಾದ್ ಘೃತಂ ॥

153. ಜಪಂಶ್ಚ ಪ್ರಯತೋ ನಿತ್ಯ-ಮುಪತಿಷ್ಠೇತಿ ಚಾನಲಂ ।
ಸ್ನಾತ್ವಾ ಜಪೇದನರ್ವಾಣಂ ನಮಸ್ಕೃತ್ಯ ಬೃಹಸ್ಪತಿಂ ॥

"ಅಗ್ನೆನಯ" ಸೂಕ್ತದಿಂದ ಹೋಮ ಮಾಡಿದರೆ ನಿಂದ್ಯಕರ್ಮಕೃತ ದೋಷ ನಿವಾರಣೆಯಾಗುತ್ತದೆ. ಈ ಮಂತ್ರದಿಂದ ಪ್ರತಿನಿತ್ಯ ಅಗ್ನ್ಯುಪಸ್ಥಾನ ಮಾಡಿದರೆ ಧನ, ಕೀರ್ತಿ, ವೀರಪುತ್ರಪ್ರಾಪ್ತಿ ಉಂಟಾಗುವುವು.

154.ವೀರಾನ್ ಧನಂ ಚ ಪ್ರಾಪ್ನೋತಿ ಸುಶ್ಲೋಕ್ಯಾಂ ಕೀರ್ತಿಮೃಚ್ಛತಿ ।
ಕಂಕತೋ ನೇತಿ ಯತ್ ಸೂಕ್ತಂ ವಿಷಾರ್ತಃ ಪ್ರಯತೋ ಜಪೇತ್ ॥

155.ವಿಷಂ ನ ಕ್ರಮತೇ ಚಾಸ್ಯ ಸರ್ಪಾದ್ದೃಷ್ಟಿ ವಿಷಾದಪಿ ।
ಯತ್ ಕೀಟ ಲೂತಾಸು ವಿಷಂ ದಂಷ್ಟ್ರಿ ವೃಶ್ಚಿಕಜಂ ಚ ಯತ್॥

156.ಮೌಲಂ ಚ ಕೃತ್ರಿಮಂ ಚೈವ ಜಪನ್ ಸರ್ವಂ ವ್ಯಪೋಹತಿ ।
ಧರ್ಮಬುದ್ಧಿಂ ಧನಂ ಪುತ್ರಾನ್ ಸೌಭಾಗ್ಯಂ ಧನವರ್ಧನಂ ॥

157. ಆರೋಗ್ಯಂ ಪುಷ್ಟಿಮಾಯುಷ್ಯಂ ಪಶೂನ್ ವಿದ್ಯಾಂ ಮಹದ್ಯಶಃ ।
ತ್ರಿರಾತ್ರೋಪೋಷಿತಃ ಸ್ನಾತಃ ಪ್ರಯತಶ್ಚರಿತವ್ರತಃ ॥

'ಕಂಕತೋ ನ' ಸೂಕ್ತವನ್ನು ಜಪಿಸುವವನಿಗೆ ಹಾವು, ಚೇಳುಗಳ ಕಡಿತದಿಂದ ವಿಷವೇರಿದ್ದರೆ ಶಮನಗೊಳ್ಳುವುದು. 3 ರಾತ್ರಿ ಉಪವಾಸವಿದ್ದು ಶುದ್ಧನಾಗಿ ಇದನ್ನು ಜಪಿಸಿದರೆ ಎಲ್ಲ ಕೃತ್ರಿಮ ದೋಷವೂ ನಿವಾರಣೆಯಾಗುತ್ತದೆ. ಧರ್ಮ ಬುದ್ಧಿಯೂ, ಧನ, ಪುತ್ರ, ಆರೋಗ್ಯ, ಆಯುಷ್ಯ, ಪಶು, ವಿದ್ಯಾಲಾಭವೂ ಪ್ರಾಪ್ತಿಯಾಗುತ್ತದೆ.

158.ಪ್ರಾಣಾಯಾಮ ಶತಂ ಕೃತ್ವೋ-ಪತಿಷ್ಠೇತ ಶತಕ್ರತುಂ ।
ಏಕಾಹಂ ಕರ ಸಂಯುಕ್ತಃ ಪಾದೌ ಸಂಧಾಯ ವಾಗ್ಯತಃ ॥

159.ಯೋ ಜಾತ ಇತಿ ಸೂಕ್ತೇನ ಋಷಿಂ ಗೃತ್ಸಮದಂ ಸ್ಮರನ್।
ಶತಕತ್ವೋ ಜಪೇದಿಂದ್ರಂ-ಮಿಂದ್ರಶ್ರೇಷ್ಠಾನಿ ಚಾಂತತಃ ॥

160.ಏಕಾಹಾಲ್ಲಭತೇ ವಿತ್ತಂ ದ್ವ್ಯಹಾತ್‌ಸಿದ್ಧಿಮನುತ್ತಮಾಂ ।
ಅಹೋಭಿಸ್ತ್ರಿಭಿರಾರೋಗ್ಯಂ ಚತುರ್ಭಿರಶನಂ ಬಹು ॥

161.ಪಂಚಭಿರ್ಬ್ರಹ್ಮ ವರ್ಚಸ್ಯಂ ಷಡ್ಭಿರಾಯುಃ ಸುಖಾವಹಂ ।
ಸಪ್ತಭಿಸ್ತನಯಾನ್ ಪುಷ್ಟಿ-ಮಷ್ಟಭಿಃ ಪ್ರಾಪ್ನುಯಾತ್ ಸದಾ ॥

162.ಪ್ರಿಯೋ ಭವತಿ ಚೇಂದ್ರಸ್ಯ ಪ್ರಿಯಂ ಧಾಮ ಸ ಗಚ್ಛತಿ।
ರಿಪುಘ್ನಂ ದಸ್ಯುಶಮನಂ ರಾಯಸ್ಪೋಷಕರಂ ಪರಂ ॥

ನೂರು ಪ್ರಾಣಾಯಾಮಗಳನ್ನು ಮಾಡಿ, ಗೃತ್ಸಮದ ಋಷಿಯನ್ನು ಸ್ಮರಿಸುತ್ತಾ ಇಂದ್ರನನ್ನು ಕುರಿತು ಕೈಜೋಡಿಸಿ, ಮೌನಿಯಾಗಿ ''ಯೋ ಜಾತ ಏವ'' ಎಂಬ ಸೂಕ್ತವನ್ನು ಕೊನೆಯಲ್ಲಿ ''ಇಂದ್ರ ಶ್ರೇಷ್ಠಾನಿ'' ಮಂತ್ರವನ್ನು ಜಪಿಸಬೇಕು. ಒಂದು ದಿನದ ಈ ಅನುಷ್ಠಾನದಿಂದ ಧನಲಾಭವೂ, 2ರಿಂದ ವಿಶೇಷ ಸಿದ್ಧಿಯೂ, ಮೂರರಿಂದ ಆರೋಗ್ಯ ಭಾಗ್ಯವೂ, 4ರಿಂದ ಬಹ್ವನ್ನ ಪ್ರಾಪ್ತಿಯೂ, 5ರಿಂದ ಬ್ರಹ್ಮವರ್ಚಸ್ಸೂ, 6ರಿಂದ ಆಯುಸ್ಸೂ, ಸುಖವೂ, 7ರಿಂದ ಸಂತತಿ ವೃದ್ಧಿಯೂ, 8ರಿಂದ ಪುಷ್ಟಿಯೂ ಉಂಟಾಗುತ್ತದೆ. ಸರ್ವಶತ್ರುನಾಶವೂ ಉಂಟಾಗಿ ಅಂತ್ಯದಲ್ಲಿ ಇಷ್ಟಲೋಕ ಪ್ರಾಪ್ತವಾಗುತ್ತದೆ.

163.ಗಣಾನಾಮಿತಿ ಯತ್ಸೂಕ್ತಂ ತಜ್ಜಪೇತ್ ಸುಖವರ್ಧನಂ।
ಸಂಧ್ಯಯೋಃ ಪ್ರಯತಸ್ತಿಷ್ಠೇತ-ಜ್ಜಪೇನಿತ್ಯಂ ಬೃಹಸ್ಪತಿಂ ॥

ಎರಡೂ ಸಂಧ್ಯೆಗಳಲ್ಲಿ ''ಗಣಾನಾಂ ತ್ವಾ'' ಸೂಕ್ತವನ್ನು ಜಪಿಸುತ್ತಾ ಬೃಹಸ್ಪತಿಯನ್ನು ಧ್ಯಾನಿಸುವವನಿಗೆ ಸರ್ವದಾ ಸುಖಪ್ರಾಪ್ತಿಯುಂಟಾಗುತ್ತದೆ. ಸರ್ವಕಾಮ ಸಿದ್ಧಿಯೂ ಲಭಿಸುತ್ತದೆ.





164.ಉಪತಿಷ್ಠೇತ ಸೂಕ್ತೇನ ಸರ್ವಕಾಮ ಸಮೃದ್ಧಯೇ ।
ಯೋ ಮೇ ರಾಜನ್ನಿತೀಮಾಂ ತು ದುಃಸ್ವಪ್ನ ಶಮನೀಮೃಚಂ॥

165.ಜಪ್ತ್ವಾ ನಾಶಯತಿ ಕ್ಷಿಪ್ರಂ ದುಃಸ್ವಪ್ನಂ ಬ್ರಾಹ್ಮಣಃ ಶುಚಿಃ ।
ಅಹೋರಾತ್ರಮುಪೋಷ್ಯೈತಂ ನಿಯತೋ ಬ್ರಹ್ಮವಿತ್ತಮಃ ॥

ಉಪವಾಸವಿದ್ದು ''ಯೋ ಮೇ ರಾಜನ್'' ಮಂತ್ರವನ್ನು ಜಪಿಸಿದರೆ ದುಃಸ್ವಪ್ನ ನಾಶವು.

166.ಪ್ರಜಾರ್ಥಂ ಜುಹುಯಾದಾಜ್ಯಂ ಚರುಂ ವಾ ಪಯಸಿಶೃತಂ।
ರಾಕಾಮಹಮಿತೀಮಾಭಿಃ ಷಷ್ಠ್ಯಾಂ ಶುಕ್ಲಸ್ಯ ಪಂಚಭಿಃ ।
ಹವಿಃ ಶೇಷಂ ಸ್ವಯಂ ಪ್ರಾಶ್ಯ ವಿಂದತೇ ಮಹತೀಂ ಪ್ರಜಾಂ॥

''ರಾಕಾಮಹಂ'' ಮುಂತಾದ 5 ಮಂತ್ರಗಳಿಂದ ಶುಕ್ಲಪಕ್ಷದ ಷಷ್ಠಿಯಲ್ಲಿ ಆಜ್ಯದಿಂದ ಅಥವಾ ಕ್ಷೀರಾನ್ನದಿಂದ ಹೋಮ ಮಾಡಿ, ಶೇಷಾನ್ನವನ್ನು ಸೇವಿಸಿದರೆ ಉತ್ತಮ ಸಂತಾನ ಪ್ರಾಪ್ತಿ.

167.ವ್ಯಾಧಿನಾ ಯೋಽಭಿ ಭೂತಃ ಸ್ಯಾದ್
ಘೋರೇಣ ಪ್ರಾಣಹಾರಿಣಾ ॥

168.ಚತುರ್ದಶೀಮುಪೋಷ್ಯೈಕಾಂ ಕೃಷ್ಣಸ್ಯ ಜುಹುಯಾಚ್ಚರುಂ ।
ಆ ತೇ ಸೂಕ್ತೇನ ರೌದ್ರೇಣ ಪ್ರತ್ಯೃಚಂ ವಾಗ್ಯತಃ ಶುಚಿಃ॥

169.ಪೂರ್ವಮಾಜ್ಯಾಹುತೀರ್ಹುತ್ವಾ ಅಥೋಪಸ್ಥಾಯ ಶಂಕರಂ।
ಹವಿಃಶೇಷೇಣ ವರ್ತೇತ ಏಕಾಂತರಮತಂದ್ರಿತಃ ।
ಪೂರ್ಣೇ ಮಾಸಿ ಜಯೇನ್ಮೃತ್ಯುಂ ರೋಗೇಭ್ಯಶ್ಚ ಪ್ರಮುಚ್ಯತೇ॥

ಘೋರವ್ಯಾಧಿಯಿಂದ ನರಳುವವನಿಗೆ ಕೃಷ್ಣಪಕ್ಷದ ಚತುರ್ದಶಿಯಂದು ''ಆತೇ ಪಿತಃ'' ಸೂಕ್ತದಿಂದ ಆಜ್ಯಹೋಮ, ಚರುಹೋಮ ಮಾಡಿ ರುದ್ರನನ್ನು ಪೂಜಿಸಿ ಶೇಷಾನ್ನ ಸೇವನೆ ಮಾಡಿದರೆ ಒಂದು ತಿಂಗಳೊಳಗೆ ರೋಗದಿಂದ ಬಿಡಲ್ಪಟ್ಟು ಮೃತ್ಯುವನ್ನು ಜಯಿಸುತ್ತಾನೆ.

170.ಅಭಿಶಸ್ಯೇತ ಯೋ ಮೋಹಾತ್ ಕುರ್ಯಾದ್ವಾ ಕರ್ಮಗರ್ಹಿತಂ॥
ಸ್ನಾತ್ವಾ ಭುಂಜನ್ ಜಪೇದಪ್ಸು ಅಂಬೀತ್ಯೃಚಮತಂದ್ರಿತಃ ।

ಕುಕರ್ಮ ಮಾಡಿದ ದೋಷವನ್ನು ನೀರಿನಲ್ಲಿ ''ಅಂಬಿತಮೇ'' ಇತ್ಯಾದಿ ಮೂರು ಮಂತ್ರಗಳ ಜಪದಿಂದ ನಿವಾರಿಸಿಕೊಳ್ಳಬೇಕು.

171.ಅಧ್ವನಿ ಪ್ರಸ್ಥಿತೋ ಯಸ್ತು ಪಶ್ಯೇಚ್ಛಕುನಿಮುತ್ಥಿತಂ ॥

172.ಅಪ್ರಶಸ್ತಂ ಪ್ರಶಸ್ತಂ ವಾ ಸ್ಥಿತ್ವೇಕ್ಷ್ಯ ಪ್ರಯತೋ ಜಪೇತ್ ।
ಕನಿಕ್ರದದ್ವಿಸೂಕ್ತಾಭ್ಯಾ ಮುಪತಿಷ್ಠೇತ್ ಕೃತಸ್ವರಂ ॥

173.ಶಕುನಿಂ ವಾಯಸಂ ವಾಪಿ ಮೃಗಂ ದಂಷ್ಟ್ರಿಣ ಮೇವ ವಾ ।
ಅಥ ದೃಷ್ಟ್ವೈವ ಜಪ್ತವ್ಯ-ಮೇತತ್ತಸ್ಕರ ಮೋಹನಂ ॥

''ಕನಿಕ್ರದತ್'' ಮತ್ತು ''ಪ್ರದಕ್ಷಣಿತ್'' ಈ 2 ಸೂಕ್ತಗಳನ್ನು ಕಾಗೆ, ಮೃಗಗಳು, ಶಕುಂತ ಪಕ್ಷಿಗಳನ್ನು ನೋಡಿದಾಗ ಜಪಿಸಿದರೆ ಶುಭವಾಗುತ್ತದೆ. ಚೋರ ಬಾಧೆಯೂ ನಿವಾರಣೆಯಾಗುತ್ತದೆ. ಪ್ರಯಾಣದಲ್ಲಿ ಅಶುಭ ಶಕುನವಾದಾಗಲೂ ಇದನ್ನು ಜಪಿಸಬೇಕು.

174.ಕಲ್ಯಾಣವಾದೀ ವಾನ್ಯೋವಾ ನ ವಾ ರಾತಿ ನದೃಶ್ಯತೇ ।
ಜಪೇದೇವ ನಮಸ್ಕೃತ್ಯ ಸಿದ್ಧಾರ್ಥಃ ಸ ನಿವರ್ತತೇ ॥

175.ನ ತಸ್ಯಾಪಿ ಭಯಂ ಕಿಂಚಿತ್ ದಸ್ಯುಭ್ಯೋಽಧ್ವನಿ ನ ಕ್ವಚಿತ್ ।
ತರತ್ಯಪಿ ಚ ದುರ್ಗಾಣಿ ಸ್ವಸ್ತಿಮಾಂಶ್ಚ ಸುಖೀ ಭವೇತ್ ॥

''ಕನಿಕ್ರದತ್'' ಮೊದಲಾದ 2 ಸೂಕ್ತಗಳನ್ನು ಜಪಿಸುವವನಿಗೆ ಪ್ರಯಾಣ ಕಾಲದಲ್ಲಿ ಯಾವುದೇ ಭಯವೂ, ಕಳ್ಳಕಾಕರ ಪೀಡೆಯೂ ಇರುವುದಿಲ್ಲ. ಸುಖಪ್ರಯಾಣವೂ, ಅರ್ಥಸಿದ್ಧಿಯೂ ಉಂಟಾಗುತ್ತದೆ. ಓಡಿ ಹೋದವನು ಹಿಂತಿರುಗಿ ಬರುತ್ತಾನೆ.

ಇತಿ ಪ್ರಥಮೋಧ್ಯಾಯಃ

---



shrinath.udupa@gmail.com

## ಅಥ ದ್ವಿತೀಯೋಧ್ಯಾಯಃ

176.ಯಸ್ಯ ಭುಕ್ತ ನ ಜೀರ್ಯೇತ ನ ತಿಷ್ಠೇದ್ವಾ ಕಥಂಚನ
ಧ್ಯಾತ್ವಾ ಸೋಽಂತರ ಮನ್ನಸ್ಯಾ-ಪ್ಯಗ್ನಿ ರಸ್ಮೀತ್ಯೃಚಂ ಜಪೇತ್॥

''ಅಗ್ನಿರಸ್ಮಿ ಜನ್ಮನಾ'' ಎಂಬ ಮಂತ್ರವನ್ನು ಭೋಜನಕ್ಕೆ ಮೊದಲು ಜಪಿಸಿದರೆ ಅಜೀರ್ಣವ್ಯಾಧಿಯು ನಿವಾರಣೆಯಾಗುತ್ತದೆ.

177.ವಿಶ್ವಾಮಿತ್ರಸ್ಯ ಸಂವಾದಂ ನದ್ಯತಿಕ್ರಮಣೇ ಜಪೇತ್ ।
ಆಪ್ಲುತ್ಯಾಚಮ್ಯ ವಿಧಿವ-ದುದಕಸ್ಯಾಂಜಲಿಂ ಕ್ಷಿಪೇತ್ ॥

178.ನಮಃ ಪ್ರವದ್ಭ್ಯ ಇತ್ಯೇತ-ದ್ಯೋ ನಿತ್ಯಂ ಹಿ ಸಮಾಚರೇತ್।
ತಂ ನದ್ಯಃ ಸ್ರೋತಸಃ ಪಾಂತಿ ಸ್ವಂ ಪುತ್ರಮಿವ ಮಾತರಃ ॥

179.ಭಯಂ ಚಾಸ್ಯ ನ ವಿದ್ಯೇತ ನದೀತೀರೇ ವನೇಷ್ವಪಿ ।
ಜಲಚರೇಭ್ಯೋ ಭೂತೇಭ್ಯಃ ಶೀತೋಷ್ಣೈರ್ನ ಚ ಬಾಧ್ಯತೇ॥

180.ಪೂರ್ಣಾಂ ತಿತೀರ್ಷುಃ ಸರಿತಂ ರಮಧ್ವಮಿತಿ ಸಂ ಸ್ಮರೇತ್।
ಓಷ್ಟಿತ್ಯೃಚ ಮಪಾಂ ಮಧ್ಯೇ ಜಪೇದ್ಯೋ ವೈ ನದೀಂ ತರನ್ ॥

181.ಸ ಶೀಘ್ರಂ ತೀರಮಾಪ್ನೋತಿ ಗಾಧಂ ವಾ ವಿಂದತೇ ದ್ವಿಜಃ।
ಯುಕ್ತೇನೈವ ರಥೇನಾಶು ಯೋಽಪಾಂ ಪಾರಂ ತಿತೀರ್ಷತಿ ।
ಉದ್ವ ಊರ್ಮಿರಿತೀಮಾಂ ತು ಜಪೇತ ನಿಯತಃ ಸ್ವಯಂ ॥

ನದಿಯನ್ನು ದಾಟುವಾಗ ವಿಶ್ವಾಮಿತ್ರ ಋಷಿಯ 'ನದೀ ಸಂವಾದ' ಸೂಕ್ತವನ್ನು (ಪ್ರಪರ್ವತಾನಾಂ.... ಮೊದಲಾದ ಮಂತ್ರಗಳು) ಜಪಿಸಿ, 'ನಮಃ ಪ್ರವದ್ಭ್ಯಃ' ಎಂದು ಅರ್ಘ್ಯಪ್ರದಾನ ಮಾಡಿದರೆ ತಾಯಿಯು ತನ್ನ ಮಕ್ಕಳನ್ನು ಹೇಗೋ ಹಾಗೆ ಪ್ರವಾಹದಿಂದ ರಕ್ಷಿಸುತ್ತದೆ. ಜಲಚರಗಳಿಂದ, ಪ್ರಾಣಿಗಳಿಂದ ಭೀತಿ ಉಂಟಾಗುವುದಿಲ್ಲ.

ಇದೇ ಸೂಕ್ತದ "ರಮಧ್ವಂ ಮೇ" ಮಂತ್ರವನ್ನು ನದಿಯನ್ನು ದಾಟುವಾಗ ಜಪಿಸಬೇಕು ಅಥವಾ "ಓಷು ಸ್ವಸಾರಃ" ಮಂತ್ರವನ್ನು ಜಪಿಸಿದರೆ ಶೀಘ್ರವಾಗಿ ಯಾವುದೇ ತೊಂದರೆಯಿಲ್ಲದೆ ನದಿಯನ್ನು ದಾಟಬಹುದು. ಹಾಗೆಯೇ "ಉದ್ವ ಊರ್ಮಿಃ" ಎಂಬ ಮಂತ್ರವೂ ಇದಕ್ಕಾಗಿಯೇ ಹೇಳಲ್ಪಟ್ಟಿದೆ.

182.ಅಧ್ವಾನಂ ಪ್ರಸ್ಥಿತಶ್ಚೈವ-ಮಾಮಂದ್ರೈ ರಿತಿ ಸಂಸ್ಮರೇತ್ ॥

183.ಕಾರ್ಯಾಣ್ಯಶೇಷತಃ ಕೃತ್ವಾ ಪ್ರನರಾಯಾತಿ ವೈ ಗೃಹಂ ।
ಅದಾತಾರಂ ಸುಪುಷ್ಟಾರ್ಥಂ ಸರ್ವದಾವಿಷ್ಟ ಚೇತನಂ ॥

ಕಾರ್ಯಾಂತರಕ್ಕಾಗಿ ಹೊರಗೆ ಹೋಗುವವನು "ಆ ಮಂದ್ರೈರಿಂದ್ರ" ಸೂಕ್ತವನ್ನು ಜಪಿಸಿದರೆ ಹೋದ ಕೆಲಸಗಳೆಲ್ಲಾ ನಿರ್ವಿಘ್ನವಾಗಿ ನಡೆದು ಸುಖವಾಗಿ ಮನೆಗೆ ಹಿಂತಿರುಗುವನು.

184.ಹತ್ವಾ ತದ್ಧನ ಮನ್ವಿಚ್ಛನ್ ಕಿಂ ತೇ ಕೃಣ್ವಂತ್ಯೃಚಂ ಜಪೇತ್।
ಇಂದ್ರಾಪರ್ವತೇತಿ ಸೂಕ್ತ-ಮಾಯುಷ್ಯಂ ದ್ರಾವಿಣಂ ಸ್ಮೃತಂ ॥

"ಇಂದ್ರಾಪರ್ವತಾ" ಸೂಕ್ತವು ಆಯುಸ್ಸು ಮತ್ತು ಧನಪ್ರಾಪ್ತಿಗೆ ಹೇಳಲ್ಪಟ್ಟಿದೆ. ಇದೇ ಸೂಕ್ತದ "ಕಿಂತೇ ಕೃಣ್ವಂತಿ" ಮಂತ್ರ ಜಪವನ್ನು ಮಾಡುವುದರಿಂದ ಶತ್ರುನಾಶ, ಧನಪ್ರಾಪ್ತಿ ಉಂಟಾಗುತ್ತದೆ.

185.ವಾಗಿಂದ್ರಿಯ ಪ್ರಮೂಢೋ ಯೋ ನ ವಿದ್ಯಾಂಪ್ರತಿಪದ್ಯತೇ।
ಇಂದ್ರಿಯಾರ್ಥಾನ್ ಯಥಾರ್ಥಾನ್ ವಾ ಯೋ ನ ವೇತ್ತಿ ಕಥಂ ಚನ ॥

186.ವಿದ್ಯಾ ವಾಧಿಗತಾ ಯಸ್ಯ ಪ್ರಣಶ್ಯೇತ ಪುನಃ ಪುನಃ ।
ಸಸರ್ಪರೀ ಋಚೌ ಜಪ್ತ್ವಾ ದ್ವೌ ಮಾಸೌ ಪ್ರತಿಪದ್ಯತೇ ॥

ಮಾತು ಬಾರದವನಿಗೆ, ಮೂಢನಿಗೆ, ವಿದ್ಯಾಹೀನನಿಗೆ "ಸಸರ್ಪರೀರಮತಿಂ" ಮೊದಲಾದ 2 ಮಂತ್ರಗಳನ್ನು ಜಪ ಮಾಡಿಸಿದರೆ 2 ತಿಂಗಳಿನಲ್ಲಿ ಯಶಪ್ರಾಪ್ತಿಯಾಗುತ್ತದೆ.




187.ಅನಸಾ ಸಂ ಪ್ರಯಾತಸ್ತು ಸ್ಥಿರೌಗಾವಾವಿತಿ ಸ್ಮರೇತ್ ।
ಚತಸ್ರಃ ಕುಶಲೇನೈತಿ ಸಿದ್ಧಾರ್ಥಃ ಸ್ಥಿರಯಾನಗಃ ॥

"ಸ್ಥಿರೌ ಗಾವೌ ಭವತಾಂ" ಮಂತ್ರವನ್ನು ಜಪಮಾಡಿ, ವಾಹನದಲ್ಲಿ ಬಹುದೂರ ಪ್ರಯಾಣ ಮಾಡಲು ಹೊರಟವನಿಗೆ ವಾಹನದಿಂದ ಯಾವುದೇ ತೊಂದರೆಯಿರದೆ ಸುಖವಾಗಿ ಕಾರ್ಯ ನೆರವೇರುತ್ತದೆ.

188.ಯಾನಾಕ್ಷಮಪ ಭಗ್ನಂತಂ ದೃಷ್ಟ್ವಾ ದುರ್ಗಪಥಿ ದ್ವಿಜಃ ।
ಅಭಿವ್ಯಯಸ್ವೇತಿ ಜಪೇ-ದೃಚಮಕ್ಷ ಬಲಂ ದಧತ್ ॥

ದುರ್ಗಮ ಹಾದಿಯಲ್ಲಿ ಪ್ರಯಾಣ ಮಾಡುವವನು "ಅಭಿವ್ಯಯಸ್ವ" ಮಂತ್ರವನ್ನು ಜಪ ಮಾಡಿದರೆ ಕೆಟ್ಟುಹೋದ ರಥ (ವಾಹನ) ಮತ್ತೆ ಸರಿಹೋಗುತ್ತದೆ.

189.ಕೃಷ್ಣಪಕ್ಷೇ ಚತುರ್ದಶ್ಯಾಂ ತ್ರಿರಾತ್ರೋಪೋಷಿತಃ ಶುಚಿಃ ।
ದಕ್ಷಿಣ ಪ್ರವಣೇ ದೇಶೇ ಶ್ಮಶಾನಸ್ಥಃ ಸಮಾಹಿತಃ ॥

190.ರಕ್ತೋಷ್ಣೀಷ್ಯಸಿ ಪಾಣಿಶ್ಚ ಬೈಲ್ವಕೇಧ್ಮೋऽನಿಲಾಶನಃ ।
ಸಪ್ತಾಹಂ ಜುಹುಯಾತ್ತೈಲಂ ಸಾರ್ಷಪಂ ಲವಣಾನ್ವಿತಂ ॥

191.ಸಮಿಧೋ ರಾಜವೃಕ್ಷಸ್ಯ ವಸಿಷ್ಠ ದ್ವೇಷಿಣೇಃ ಪಠನ್ ।
ಯಂ ದ್ವಿಷ್ಯಾತ್ತಸ್ಯ ಕೃತ್ವಾ ತು ಶಮ್ಯಾಕೇನಾಕೃತಿಂ ನಿಶಿ ॥

192.ಅಧಿಷ್ಠಾಯ ಚ ತಾಂ ಕುರ್ಯಾ-ದೃಗ್ಭಿಶ್ಚತಸೃಭಿರ್ದ್ವಿಜಃ ।
ಉದ್ದಿಶ್ಯ ನಾಮಹೋಮೋಯಂ ಸಪ್ತರಾತ್ರಂ ನ ಜೀವತಿ ॥

193.ವಸಿಷ್ಠಾನಾಂ ತತೋ ಹಂತಿ ಬ್ರಹ್ಮ ತತ್ ಕುಶಿಶೋದಿತಂ ।
ನಾಸ್ಯ ಕಶ್ಚಿದವಧ್ಯೋऽಸ್ತಿ ಜಪತೋ ಜುಹ್ವತೋऽಪಿ ವಾ ॥

ಮೂರು ರಾತ್ರಿ ಉಪವಾಸವಿದ್ದು, ಅಮಾವಾಸ್ಯೆ ಹಿಂದಿನ ದಿನ ಸ್ಮಶಾನದಲ್ಲಿ ಕೆಂಪುವಸ್ತ್ರ ಧರಿಸಿ, ಕೈಯಲ್ಲಿ ಕತ್ತಿಯನ್ನು ಹಿಡಿದು, ಬಿಲ್ವ ಮರದ ಸಮಿತ್ತುಗಳಿಂದ, ಸಾಸಿವೆ ಎಣ್ಣೆ ಮತ್ತು ಉಪ್ಪಿನಿಂದ

 

"ಇಂದ್ರೋತಿಭಿರ್ಬಹುಲಾಭಿಃ" ಮೊದಲಾದ 4 ಮಂತ್ರಗಳನ್ನು ಪಠಿಸುತ್ತಾ ಅಗ್ನಿಯಲ್ಲಿ ಹೋಮ ಮಾಡಿದರೆ ವಿದ್ವೇಷವು ದೂರವಾಗಿ 7 ರಾತ್ರಿಯಲ್ಲಿ ಶತ್ರುನಾಶವಾಗುತ್ತದೆ.

194. ದ್ವಾವಿಂಶಕಂ ಜಪೇತ್ ಸೂಕ್ತ-ಮಾಧ್ಯಾತ್ಮಿಕ ಮನುತ್ತಮಂ ।
ಪರ್ವಸು ಪ್ರಯತೋ ನಿತ್ಯ-ಮಿಷ್ಟಾನ್ ಕಾಮಾನ್ ಸಮಶ್ನುತೇ।

"ಇಮಂ ಮಹೇ" ಎಂಬ 22 ಮಂತ್ರಗಳ ಸೂಕ್ತವು ಅಧ್ಯಾತ್ಮಿಕವಾಗಿದೆ. ಇದನ್ನು ನಿತ್ಯ ಪರ್ವದಲ್ಲಿ ಪಠಿಸುವವನು ಎಲ್ಲ ಇಷ್ಟಾರ್ಥವನ್ನೂ ಪಡೆಯುತ್ತಾನೆ.

195. ಬೃಹಸ್ಪತಿಮಜಾಶ್ವಂ ಸವಿತಾರಂ ಬಭ್ರುಮೇವ ಚ ।
ಋತಾವೃತಾ ದಿನೇ ದಿನೇ-ತ್ಯೃಚೈಃ ಪಂಚಭಿರನ್ವಹಂ ॥

196. ಬೃಹಸ್ಪತ ಇತಿ ಪಂಚಾಹಂ ಪ್ರತ್ಯೃಚಂ ಜುಹುಯಾದ್ ಘೃತಂ ।
ಹುತ್ವಾಗ್ನಿಮರ್ಚಯಿತ್ವಾ ತು ಗಂಧಮಾಲ್ಯೈಃ ಸುಧೂಪಕೈಃ ।

197. ಏತಾವದ್ದೇವತಾಃ ಪಂಚ ಕಾಮ್ಯೈರರ್ಚತಿ ಪಂಚಭಿಃ ।
ರತ್ನೈರಪತ್ಯೈಃ ಪಶುಭಿ-ರ್ಮುಖ್ಯೈರ್ದೀರ್ಘೇಣ ಚಾಯುಷಾ ॥

"ಬೃಹಸ್ಪತೇ ಜುಷಸ್ವ" ಇತ್ಯಾದಿ 5 ತೃಚಗಳಿಂದ (15 ಮಂತ್ರಗಳು) ಬೃಹಸ್ಪತಿ, ಪೂಷಾ, ಸವಿತಾ, ಸೋಮ, ಮಿತ್ರಾವರುಣರನ್ನು ಕುರಿತು ಪ್ರತಿದಿನವೂ ಅಥವಾ ಪ್ರತಿ ಋತುವಿನಲ್ಲೂ ಘೃತಾಹುತಿ ಕೊಟ್ಟರೆ ಸಂತತಿ, ಧನ, ಆಯುಸ್ಸು, ಪಶುಗಳು ಲಭಿಸುತ್ತವೆ.

## ಗಾಯತ್ರೀ ಮಹಿಮೆ

198. ಅಥ ವೇದಾದಿ ಗೀತಾಯಾಃ ಪ್ರಸಾರ ಜನನಂ ವಿಧಿಂ ।
ಗಾಯತ್ರ್ಯಾಃ ಸಂಪ್ರವಕ್ಷ್ಯಾಮ ಧರ್ಮಕಾಮಾರ್ಥ ಮೋಕ್ಷದಂ॥

ಈಗ ಧರ್ಮಾರ್ಥ ಕಾಮ ಮೋಕ್ಷಪ್ರದವಾದ ವೇದದ ಆದಿಗೀತೆಯಾದ ಗಾಯತ್ರಿಯ ವಿಧಿಯನ್ನು ವಿಸ್ತಾರವಾಗಿ ತಿಳಿಸುತ್ತೇನೆ.

 

199. ನಿತ್ಯೇ ನೈಮಿತ್ತಕೇ ಕಾಮ್ಯೇ ತ್ರಿತಯೇ ತು ಪರಾಯಣಂ ।
ಗಾಯತ್ರ್ಯಾಶ್ಚ ಪರಂ ನಾಸ್ತಿ ಇಹಲೋಕೇ ಪರತ್ರ ಚ ॥

ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ-ಈ ಮೂರೂ ಕರ್ಮಗಳಲ್ಲೂ ಇಹಪರಗಳಲ್ಲಿ ಗಾಯತ್ರಿಗಿಂತ ಬೇರೆ ಯಾವ ಮಂತ್ರವೂ ಇಲ್ಲ.

200. ಮೇಧ್ಯಾನ್ನ ಮಿತಭುಕ್ ಮೌನೀ ತ್ರಿಃ ಸ್ನಾನಾರ್ಚನ ತತ್ಪರಃ।
ಜಪೇಲ್ಲಕ್ಷತ್ರಯಂ ಧೀಮಾ-ನನನ್ಯಮಾನಸಃ ಕ್ರಿಯಃ ॥

201. ಕರ್ಮಭಿರ್ಯೋಜಯೇತ್ ಪಶ್ಚಾತ್ ಕ್ರಮಶಃ ಸ್ವೇಚ್ಛಯಾಪಿ ವಾ ।
ಯಾವತ್ ಕಾರ್ಯಂ ನ ಕುರ್ವೀತ ತಾವಲ್ಲುಂಪೇನ್ನ ತದ್ ವ್ರತಂ॥

ಯಾವುದೇ ಕಾರ್ಯದ ಸಿದ್ಧಿಗಾಗಿ ಮೊದಲು ಮೂರು ಲಕ್ಷ ಗಾಯತ್ರಿಯನ್ನು ಜಪಿಸಬೇಕು. ಜಪಕಾಲದಲ್ಲಿ ಮೂರೂ ಕಾಲಗಳಲ್ಲೂ ಸ್ನಾನ ಮಾಡುತ್ತಾ ಮೌನಿಯಾಗಿ, ಶುದ್ಧ ಹಾಗೂ ಅಲ್ಪಾಹಾರಿಯಾಗಿರಬೇಕು.

202. ಆದಿತ್ಯಸ್ಯೋದಯೇ ಸ್ನಾತ್ವಾ ಸಹಸ್ರಂ ಪ್ರತ್ಯಹಂ ಜಪೇತ್ ।
ಆಯುರಾರೋಗ್ಯಮೈಶ್ವರ್ಯಂ ಧನಂ ಚ ಲಭತೇ ಧ್ರುವಂ ॥

ಸೂರ್ಯೋದಯದಲ್ಲಿ ಶುಚಿಯಾಗಿ ನಿತ್ಯವೂ ಸಹಸ್ರ ಗಾಯತ್ರಿ ಜಪಿಸುವವನು ಆಯುರಾರೋಗ್ಯೈಶ್ವರ್ಯಾದಿಗಳನ್ನು ಶೀಘ್ರವೇ ಪಡೆಯುತ್ತಾನೆ.

203. ತ್ರಿರಾತ್ರೋಪೋಷಿತಃ ಸಮ್ಯಗ್ ಘೃತಂ ಹುತ್ವಾ ಸಹಸ್ರಶಃ ।
ಸಹಸ್ರಂ ಲಾಭಮಾಪ್ನೋತಿ ರಾಹುಸೂರ್ಯ ಸಮಾಗಮೇ ॥

204. ಪಲಾಶ ಸಮಿಧಾಂ ಚೈವ ಘೃತಾಕ್ತಾನಾಂ ಹುತಾಶನೇ ।
ಸಹಸ್ರಂ ಲಾಭಮಾಪ್ನೋತಿ ರಾಹು ಸೂರ್ಯ ಸಮಾಗಮೇ ॥

ಗ್ರಹಣ ಕಾಲದಲ್ಲಿ ಹಿಂದಿನ 3 ರಾತ್ರಿ ಉಪವಾಸವಿದ್ದು ಸಹಸ್ರ ಸಂಖ್ಯೆಯಲ್ಲಿ ಗಾಯತ್ರಿಯಿಂದ ಘೃತಾಹುತಿ ಕೊಟ್ಟರೆ ಸಾವಿರ ಪಟ್ಟು ಲಾಭವು ಪ್ರಾಪ್ತಿಯಾಗುತ್ತದೆ. ತುಪ್ಪದೊಂದಿಗೆ ಪಲಾಶ (ಮುತ್ತುಗ) ಸಮಿತ್ತಿನಿಂದ ಹೋಮ ಮಾಡಿದರೂ ಇದೇ ಫಲ.

205.ಹುತ್ವಾ ತು ಖಾದಿರಂ ವಹ್ನೌ ಸಘೃತಂ ರಕ್ತ ಚಂದನಂ ।
ಸಹಸ್ರಂ ಹೇಮ ಚಾಪ್ನೋತಿ ರಾಹು ಚಂದ್ರ ಸಮಾಗಮೇ ॥

ಚಂದ್ರಗ್ರಹಣ ಕಾಲವಲ್ಲಿ ಕಗ್ಗಲಿ ಸಮಿತ್ತಿನಿಂದ ಹಾಗೂ ಕೆಂಪುಗಂಧ ಮತ್ತು ತುಪ್ಪದಿಂದ ಹೋಮ ಮಾಡಿವರೆ (ಗಾಯತ್ರಿ ಮಂತ್ರದಿಂದ) ಹೇರಳ ಸ್ವರ್ಣ ಲಾಭವಾಗುತ್ತದೆ.

206.ರಕ್ತಚಂದನಮಿಶ್ರಂ ತು ಸಘೃತಂ ಹವ್ಯವಾಹನೇ ।
ಹುತ್ವಾ ಗೋಮಯಮಾಪ್ನೋತಿ ಸಹಸ್ರಂ ಗೋಧನಂ ದ್ವಿಜಃ॥

207.ಯಸ್ಯಾಸ್ತು ಗೋರ್ಗೋಮಯೇನ ಗುಟಿಕಾನಾಂ ಸಹಸ್ರಶಃ।
ಹುತ್ವಾ ತಾಂ ಗಾಮವಾಪ್ನೋತಿ ಘೃತಾಕ್ತಾನಾಂ ಹುತಾಶನೇ ॥

ಹಾಗೆಯೇ ಕೆಂಪುಗಂಧ, ಘೃತ, ಗೋಮಯಗಳಿಂದ ಹೋಮ ಮಾಡಿದರೆ ಸಹಸ್ರಾರು ಗೋವುಗಳ ಪ್ರಾಪ್ತಿ.

208.ಯವೈರಶ್ವಾಂಸ್ತಿಲೈರ್ಗಜಾನ್ ಮಹಿಷೀರ್ಯಾವಕೈಸ್ತಥಾ ।
ಶಾಲಿ ತಂಡುಲ ಹೋಮೇನ ಕನ್ಯಾಲಾಭಮವಾಪ್ನುಯಾತ್ ॥

ಜವೆ ಗೋಧಿಯಿಂದ ಹೋಮ ಮಾಡಿದರೆ ಅಶ್ವಲಾಭವೂ, ತಿಲಹೋಮದಿಂದ ಗಜಲಾಭವೂ ಅರಗಿನಿಂದ ಎಮ್ಮೆಗಳೂ, ಅಕ್ಕಿಯಿಂದ ಕನ್ಯಾಲಾಭವೂ ಉಂಟಾಗುತ್ತದೆ.

209.ಜಾತೀ ಚಂಪಕ ರಕ್ತಾರ್ಕ ಕುಸುಮಾನಾಂ ಸಹಸ್ರಶಃ ।
ಹುತ್ವಾ ವಸ್ತ್ರಾಣ್ಯವಾಪ್ನೋತಿ ಘೃತಾಕ್ತಾನಾಂ ಹುತಾಶನೇ ॥

ಜಾಜಿ, ಸಂಪಿಗೆ, ಕೆಂಪು ಎಕ್ಕದ ಹೂಗಳಿಂದ ಘೃತದೊಂದಿಗೆ ಹೋಮ ಮಾಡಿದರೆ ವಸ್ತ್ರಲಾಭ.

210.ಸೂರ್ಯಬಿಂಬೇ ಜಲಮಧ್ಯೆ ತೋಯಂ ಹುತ್ವಾ ಸಹಸ್ರಶಃ ।
ಸಹಸ್ರಂ ಪ್ರಾಪ್ನುಯಾದ್ಧೈಮಂ ರೌಪ್ಯಮಿಂದುಮಯೇ ಹುತೇ॥



shrinath.udupa@gmail.com

ಸೂರ್ಯೋದಯ ಕಾಲದಲ್ಲಿ ನೀರಿನ ಮಧ್ಯೆ ನಿಂತು ಸಹಸ್ರ ಗಾಯತ್ರೀ ಹೋಮ ಮಾಡಿದರೆ ಸ್ವರ್ಣಲಾಭವೂ ಚಂದ್ರೋದಯದಲ್ಲಿ ಮಾಡುವುದರಿಂದ ರಜತ ಲಾಭವೂ ಉಂಟಾಗುತ್ತದೆ.

211.ಅಲಕ್ಷ್ಮೀ ಪಾಪಸಂಯುಕ್ತೋ ಮಲವ್ಯಾಧಿ ವಿನಾಶಕೈಃ ।
ಮುಚ್ಯೇತ್ ಸಹಸ್ರಜಪ್ತೇನ ಸ್ನಾಯಾದ್ಯಸ್ತು ಜಲೇನ ವೈ ॥

ನೀರನ್ನು ಸ್ಪರ್ಶಿಸಿಕೊಂಡು ಸಹಸ್ರಗಾಯತ್ರೀ ಜಪಿಸಿ ಸ್ನಾನ ಮಾಡಿದರೆ ಪಾಪನಾಶ, ವ್ಯಾಧಿನಾಶವೂ ಆಗುವುದು.

212.ಯಾಂ ದಿಶಂ ಸಪ್ತಜಪ್ತೇನ ಲೋಷ್ಟೇನ ಸಂಪ್ರಚಾರಯೇತ್।
ಚೌರಾಗ್ನಿಮಾರುತೋತ್ಥಾನಿ ಭಯಾನಿ ನ ಭವಂತಿ ವೈ ॥

ಯಾವ ದಿಕ್ಕಿಗೆ ಅಭಿಮುಖವಾಗಿ ಏಳು ಸಲ ಜಪಿಸಿ ಮಣ್ಣನ್ನು ಎರಚಿದರೆ ಆ ದಿಕ್ಕಿನಿಂದ ಕಳ್ಳರ, ಅಗ್ನಿಯ, ಬಿರುಗಾಳಿಯ ಭಯವು ಇರುವುದಿಲ್ಲ.

213.ಕ್ಷೀರಾಹಾರೋ ಜಪೇಲ್ಲಕ್ಷಂ-ಮಪಮೃತ್ಯುಂ ವ್ಯಪೋಹತಿ ।
ಘೃತಾಶೀ ಪ್ರಾಪ್ನುಯಾನ್ಮೇಧಾಂ ಬಹುವಿಜ್ಞಾನ ಸಂಚಯಂ ॥

ಕೇವಲ ಹಾಲನ್ನು ಸೇವಿಸುತ್ತಾ ಲಕ್ಷ ಗಾಯತ್ರಿ ಜಪವನ್ನು ಜಪಿಸಿದರೆ ಮೃತ್ಯುವನ್ನು ಜಯಿಸುತ್ತಾನೆ. ಕೇವಲ ತುಪ್ಪವನ್ನು ಸೇವಿಸುತ್ತಾ ಲಕ್ಷ ಗಾಯತ್ರಿ ಜಪವನ್ನು ಜಪಿಸಿದರೆ ಮಹಾ ಮೇಧಾವಿಯೂ, ಜ್ಞಾನಿಯೂ ಆಗುತ್ತಾನೆ.

214.ಹುತ್ವಾ ವೇತಸಪತ್ರಾಣಿ ಘೃತಾಕ್ತಾನಿ ಹುತಾಶನೇ ।
ಲಕ್ಷಾದ್ವರ್ಷಾಪಯದ್ದೇವಂ ಸಾರ್ವಭೌಮಂ ನ ಸಂಶಯಃ ॥

ಹಬ್ಬೆಗಿಡದ ಪತ್ರವನ್ನು ತುಪ್ಪದೊಂದಿಗೆ ಲಕ್ಷ ಹೋಮ ಮಾಡಿದರೆ ಸಾರ್ವಭೌಮನೇ ಆಗುತ್ತಾನೆ.

215.ಲಕ್ಷೇಣ ಭಸ್ಮಹೋಮಸ್ಯ ಕೃತ್ಯಾಹ್ಯುತ್ತಿಷ್ಠತೇ ಜಲಾತ್ ।
ಆದಿತ್ಯಾಭಿಮುಖಃ ಸ್ಥಿತ್ವಾ ನಾಭಿಮಾತ್ರೇ ಜಲೇ ಶುಚಿಃ ॥

216.ತಿಲಾನಾಂ ಲಕ್ಷಹೋಮೇನ ಘೃತಾಕ್ತಾನಾಂ ಹುತಾಶನೇ ।

ಸರ್ವಕಾಮ ಸಮೃದ್ಧಾತ್ಮಾ ಪರಂ ಸ್ಥಾನಮವಾಪ್ನುಯಾತ್ ॥

ಘೃತಾಕ್ತ ತಿಲಹೋಮ ಲಕ್ಷ ಸಂಖ್ಯೆಯಲ್ಲಿ ಮಾಡಿದರೆ ಸರ್ವಕಾಮ ಪೂರ್ಣನಾಗುತ್ತಾನೆ, ಮೋಕ್ಷವೂ ದೊರೆಯುತ್ತದೆ.

217.ಯವಾನಾಂ ಲಕ್ಷಹೋಮೇನ ಘೃತಾಕ್ತಾನಾಂ ಹುತಾಶನೇ ।
ಸರ್ವಕಾಮ ಸಮೃದ್ಧಾತ್ಮಾ ಪರಂ ಸ್ಥಾನಮವಾಪ್ನುಯಾತ್ ॥

ಜವೆ ಗೋಧಿ ಹಾಗೂ ತುಪ್ಪದಿಂದ ಲಕ್ಷಹೋಮಮಾಡಿದರೆ ಇಷ್ಟಾರ್ಥ ಸಿದ್ಧಿಯಾಗುತ್ತದೆ.

218.ಘೃತಸ್ಯಾಹುತಿ ಲಕ್ಷೇಣ ಸರ್ವಾನ್ ಕಾಮಾನವಾಪ್ನುಯಾತ್ ।
ಪಂಚಗವ್ಯಾಶನೋ ಲಕ್ಷಂ ಜಪನ್ ಜಾತಿಸ್ಮರೋ ಭವೇತ್ ॥

ಘೃತಾಹುತಿಯ ಲಕ್ಷಹೋಮದಿಂದ ಇಷ್ಟಾರ್ಥ ಸಿದ್ಧಿಯಾಗುತ್ತದೆ. ಹಾಗೂ ಪಂಚಗವ್ಯವನ್ನೇ ಸೇವಿಸುತ್ತಾ ಇದ್ದು ಲಕ್ಷಜಪಮಾಡಿದರೆ ಪೂರ್ವಜನ್ಮ ಸ್ಮರಣೆಯುಂಟಾಗುತ್ತದೆ.

219.ತದೇವ ಹ್ಯನಲೇ ಹುತ್ವಾ ಪ್ರಾಪ್ನೋತಿ ಬಹುಶೋ ಧನಂ ।
ಅನ್ನಾದ್ಯ ಹವನಾನ್ನಿತ್ಯ-ಮನ್ನಾದ್ಯಂ ಚ ಭವೇತ್ಸದಾ ॥

ಪಂಚಗವ್ಯದಿಂದ ಲಕ್ಷಹೋಮ ಮಾಡಿದರೆ ಧನಪ್ರಾಪ್ತಿಯಾಗುತ್ತದೆ. ಅನ್ನದಿಂದ ಹೋಮ ಮಾಡಿದರೆ ಸದಾ ಅನ್ನ ಲಾಭವಾಗುತ್ತದೆ.

220.ಜುಹುಯಾತ್ ಸರ್ವಸಾಧ್ಯಾನಾ-ಮಾಹುತ್ಯಯುತಸಂಖ್ಯಯಾ।
ರಕ್ತಸಿದ್ಧಾರ್ಥಕಾನ್ ಹುತ್ವಾ ಸರ್ವಾನ್ ಸಾಧಯತೇ ರಿಪೂನ್॥

ಹತ್ತು ಸಾವಿರ ಸಂಖ್ಯೆಯಲ್ಲಿ ಹೋಮ ಮಾಡಿದರೆ ಶತ್ರುನಾಶವಾಗುತ್ತದೆ.

221.ಲವಣಂ ಮಧುಸಂಯುಕ್ತಂ ಹುತ್ವಾ ಸರ್ವಂ ವಶೀ ಭವೇತ್।
ಹುತ್ವಾ ತು ಕರವೀರಾಣಿ ರಕ್ತಾನಿ ಜನಯೇಜ್ಜ್ವರಂ ॥

ಮಧು ಮಿಶ್ರಿತ ಲವಣವನ್ನು ಹೋಮ ಮಾಡಿದರೆ ಎಲ್ಲವೂ ವಶವಾಗುತ್ತದೆ.




ಕೆಂಪು ಕರವೀರ ಪುಷ್ಪದಿಂದ ಹೋಮ ಮಾಡಿದರೆ ಶತ್ರುಗಳಿಗೆ ಜ್ವರಬಾಧೆಯುಂಟಾಗುತ್ತದೆ.

222.ಹುತ್ವಾ ಬೈಭೀತಕಂ ತೈಲಂ ದೇಶಾದೇವ ಪ್ರಚಾರಯೇತ್ ।
ಹುತ್ವಾ ತು ನಿಂಬಪತ್ರಾಣಿ ವಿದ್ವೇಷಂ ಜನಯೇನ್ನೃಣಾಂ ॥

ತಾರೆ ಗಿಡದ ತೈಲದಿಂದ ಮತ್ತು ನಿಂಬ ಪತ್ರದಿಂದ ಹೋಮ ಮಾಡಿದರೆ ವಿದ್ವೇಷ ಉಂಟಾಗುತ್ತದೆ.

223.ರಕ್ತಾನಾಂ ತುಂಡುಲಾನಾಂ ತು ಘೃತಾಕ್ತಾನಾಂ ಹುತಾಶನೇ ।
ಹುತ್ವಾ ಬಲಮವಾಪ್ನೋತಿ ಶತ್ರುಭಿರ್ನ ಸ ಜೀಯತೇ ॥

224.ಪ್ರತ್ಯಾನಯನ ಸಿದ್ಧ್ಯರ್ಥಂ ಮಧುಸರ್ಪಿ; ಸಮನ್ವಿತಂ ।
ಗವ್ಯಂ ಕ್ಷೀರಂ ಪ್ರದೀಪ್ತೇಗ್ನೌ ಜುಹ್ವತಸ್ತತ್ ಪ್ರಶಾಮ್ಯತಿ ॥

ಕೆಂಪಕ್ಕಿ ಮತ್ತು ತುಪ್ಪದಿಂದ ಹೋಮ ಮಾಡಿದರೆ ಶಕ್ತಿಶಾಲಿಯಾಗಿ, ಶತ್ರುಗಳನ್ನು ಗೆಲ್ಲುತ್ತಾನೆ. ಮಧುಯುಕ್ತ ಪಂಚಗವ್ಯ ಹೋಮವು ಪ್ರತ್ಯಾನಯನಕ್ಕಾಗಿ ಹೇಳಿದೆ.

225.ಬ್ರಹ್ಮಚಾರೀ ಮಿತಾಹಾರೋ ಯಃ ಸಹಸ್ರತ್ರಯಂ ಜಪೇತ್।
ಸಂವತ್ಸರೇಣ ಲಭತೇ ಧನೈಶ್ವರ್ಯಂ ನ ಸಂಶಯಃ ॥

ಒಂದು ವರ್ಷಕಾಲ ಬ್ರಹ್ಮಚರ್ಯೆಯಲ್ಲಿದ್ದು, ಮಿತಾಹಾರನಾಗಿ, 3 ಸಾವಿರ ಜಪವನ್ನು ಪ್ರತಿನಿತ್ಯ ಮಾಡಿದರೆ ಐಶ್ವರ್ಯವಂತನಾಗುತ್ತಾನೆ.

226.ಶಮೀಬಿಲ್ವ ಪಲಾಶಾನಾ-ಮರ್ಕಸ್ಯತು ವಿಶೇಷತಃ ।
ಪುಷ್ಪಾಣಾಂ ಸಮಿಧಾ ಚೈವ ಹುತ್ವಾ ಹೇಮಮವಾಪ್ನುಯಾತ್॥

ಬನ್ನಿ, ಬಿಲ್ವ, ಮುತ್ತುಗ, ಎಕ್ಕ, ಇವುಗಳ ಹೂಗಳೊಂದಿದೆ, ಸಮಿದ್ಹೋಮ ಮಾಡಿದರೆ ಸ್ವರ್ಣಲಾಭ.

227.ಅಬ್ರಹ್ಮತ್ರ್ಯಂಬಕಾದೀನಾಂ ಯಸ್ತ್ವಾಯತನಮಾಶ್ರಿತಃ ।
ಜಪೇಲ್ಲಕ್ಷಂ ನಿರಾಹಾರಃ ಸ ತಸ್ಯ ವರದೋ ಭವೇತ್ ॥

ಇದೇ ಸೂಕ್ತದಿಂದ ಸ್ತ್ರೀ ವಶ ವಿಧಿಯೂ ಹೇಳಲ್ಪಡುತ್ತದೆ. ಭತ್ತದ ಹೊಟ್ಟನ್ನು ಉಗುರಿನಿಂದ ಕತ್ತರಿಸಿ ತೆಗೆದು ಅಕ್ಕಿಯನ್ನು ಕುಟ್ಟಿ ಪುಡಿಮಾಡಿ, ಬೇಯಿಸಿ ಸ್ತ್ರೀಯ ಪ್ರತಿಕೃತಿಯನ್ನು ಅದರಿಂದ ಮಾಡಿ ಸಾಸಿವೆ ಎಣ್ಣೆಯಿಂದ ಹೋಮ ಮಾಡಬೇಕು. ಹಾಲು, ಜಂಘ, ಜಾನು, ಊರು, ಬಾಹು, ಶಿರದ ಭಾಗಗಳನ್ನು ಕ್ರಮವಾಗಿ ಹೋಮಿಸಬೇಕು. ಕೊನೆಯಲ್ಲಿ ಹೃದಯದೇಶವನ್ನು ಹೋಮಿಸಿದರೆ ಸ್ತ್ರೀ ವಶವಾಗುತ್ತದೆ. ಪರನಾರಿಯರನ್ನು ಕುರಿತಾಗಲೀ, ಧರ್ಮ ಬುದ್ಧಿಯುಳ್ಳ, ಸುಶೀಲೆಯಾದ ಸ್ತ್ರೀಯರನ್ನು ಕುರಿತಾಗಲೀ ಇಂಥ ಪ್ರಯೋಗ ಮಾಡಿದರೆ ವ್ಯತಿರಿಕ್ತ ಫಲವೆಂದು ಎಚ್ಚರಿಸಿದ್ದಾರೆ. ಅಭಿಮಂತ್ರಿಸಿದ ಫಲವನ್ನು ಸ್ತ್ರೀ ಗೆ ಪ್ರಾಶನ ಮಾಡಿಸಿದರೂ ಸಾಂಮನಸ್ಯ ಉಂಟಾಗುತ್ತದೆ. ಪುರುಷರಲ್ಲಿ ಇದೇ ವಿಧಿ ಆಚರಿಸಬಹುದು. ಜ್ಞಾತಿಗಳಲ್ಲಿಸಾಂಮನಸ್ಯ ಉಂಟು ಮಾಡಲೂ ಶತ್ರುತ್ವನಾಶಕ್ಕಾಗಿಯೂ ಮನ್ಯುಸೂಕ್ತ ಬಹಳ ಪರಿಣಾಮಕಾರಿ.

474. ಸೂರ್ಯಾಯೈ ಭಾವವೃತ್ತಂ ತು ಶ್ರಾವಯೇತ್‌ಕನ್ಯಕಾ ಪಿತಾ ।
ಅನುರೂಪಂ ಸುಸದೃಶಂ ಭರ್ತಾರಂ ತೇನ ವಿಂದತಿ ॥

475. ಇಮಾಮಿತಿ ಜಪೇತ್ ಕನ್ಯಾನಾಭಿಮಾಲಭ್ಯ ನಿತ್ಯಶಃ ।

476 ಏವಮೇವ ಜಪೇತ್ ಭರ್ತಾ ದೀರ್ಘಾಯುಃ ಸಂಭವೇತ್ತತಃ ।
ಸ್ನಾಪಯೇದಭಿರೂಪೈಶ್ಚ ಭ್ರಾತಾ ಕನ್ಯಾಪಿತಾಪಿ ವಾ ॥

ಶತಂ ಪುತ್ರವತೀ ಯಾವತ್ ನ ಚ ಭರ್ತ್ರಾ ವಿಯುಜ್ಯತೇ ।

477 ಸಮ್ರಾಜ್ಞೀತಿ ಪಜೇನ್ ಮೂರ್ಧ್ನಿ ಕನ್ಯಾಮೂಲಭ್ಯ ನಿತ್ಯಶಃ ॥
ಶ್ವಶ್ರೂಶ್ವಶುರ ದೇವರೈ-ರ್ನನಾಂದ್ರಾ ಚಾಪಿಪೂಜ್ಯತೇ ।

ಕನ್ಯಾಪಿತೃವು ಸತ್ಯೇನೋತ್ತಭಿತಾ ಎಂಬ ಸೂರ್ಯಾಸೂಕ್ತವನ್ನು ಕನ್ಯೆಗೆ ಶ್ರವಣ ಮಾಡಿಸಿದರೆ ಶೀಘ್ರವಾಗಿ ಅನುರೂಪನಾದ ವರನನ್ನು ಪಡೆಯುತ್ತಾಳೆ. (ಮದುವೆಯಾಗದ ಕನ್ಯೆಯರಿಗೆ ಈ

shrinath.udupa@gmail.com


ಪ್ರಯೋಗ ಮಾಡಿ ನೋಡಬಹುದು) ''ಇಮಾಂ ತ್ವಮಿಂದ್ರ'' ಎಂಬ ಮಂತ್ರವನ್ನು ಸ್ವನಾಭಿಯನ್ನು ಸ್ಪರ್ಶಿಸಿ ನಿತ್ಯ ಹೇಳಬೇಕು. ಇದರಿಂದ ಗಂಡನಿಗೆ ಆಯುವೃದ್ಧಿಯೂ, ತನಗೆ ನೂರು ಪುತ್ರರನ್ನು ಪಡೆಯುವ ಶಕ್ತಿಯೂ ಉಂಟಾಗುತ್ತದೆ. ''ಸಮ್ರಾಜ್ಞೀ'' ಎಂಬ ಮಂತ್ರವನ್ನು ಹೇಳುತ್ತಾ ಕನ್ಯೆಯ ತಲೆಯನ್ನು ನಿತ್ಯವೂ ಸ್ಪರ್ಶಿಸಿದರೆ ಅತ್ತೆ ಮಾವ, ಮೈದುನ, ನಾದಿನಿಯರಿಂದಲೂ ಪೂಜಿಸಲ್ಪಡುತ್ತಾಳೆ.

478 ಇಂದ್ರಾಣ್ಯಾಕೃತ ಸಂವಾದಂ ಸ್ನಾನೇ ಸೂಕ್ತಂ ಪ್ರಯೋಜಯೇತ್ ॥

479 ನವ ವರ್ಗೋತ್ತಮಯುತಂ ಪತಿ ಸೌಭಾಗ್ಯಪುತ್ರದಂ ।
ಜಲಪುಷ್ಪೋತ್ಕರಯುತೇ ಚಿತ್ರ ಕುಂಭ ಸಮಾವೃತೇ ॥

480 ಕರ್ತವ್ಯೋಽತ್ರ ತಥಾಯೋಗಃ ಸೋಮಗಂಧರ್ವವಹ್ನಿನಾಂ ।
ಭಗಾಯಾಪ್ಸರಸಾಂ ಚೈವ ಯಕ್ಷಾಧಿಪತಯೇಪಿ ಚ ॥

481 ಇಂದ್ರಾಣ್ಯೈ ದೇವಪತ್ನೀನಾಂ ರತಿಪ್ರದ್ಯುಮ್ನಯೋಸ್ತಥಾ ।
ನದೀ ಸಲಿಲಸಂಪೂರ್ಣೇ ಪಂಚಗವ್ಯ ಸಮಾಯುತೇ ॥

482 ಹುತ್ವಾಗ್ನಿಂ ಸ್ನಾಪಯೇತ್ ಕನ್ಯಾಂ ಸ್ಥಿತಾಂ ದೇಶೇ ತು ದಕ್ಷಿಣೇ ।
ಪ್ರಿಯಂಗುವಟನಾಗಾನಾಂ ಕಷಾಯೋದ್ವೃಷ್ಟಕೇರಸಂ ।

483 ಸಂಪಾತಾಭಿಹುತಂ ಕೃತ್ವಾ ಸರ್ವೌಷಧಿ ಸಮನ್ವಿತಂ ।
ಅಭಿಮಂತ್ರ್ಯ ಚ ಸೂಕ್ತಾಂತೇ ನವಭಿಶ್ಚಸ್ತುವೀತ ವೈ ॥

484 ಏತಾಭಿರದ್ಭಿಃ ಪೂರ್ಣೇನ ಹ್ಯಭಿಷಿಂಚೇದುಪೋಷಿತಾಂ ।
ಯಾಃಪತಿಘ್ನ್ಯಶ. ಸ್ತ್ರಿಯಸ್ತ್ವಶ್ಯಃ ಶಾಮ್ಯಂ ತೇನಾಸ್ಥಿತೇನ ವೈ ॥

485 ಸ್ನಾಪಯೇದಾಹನಸ್ಯಾದ್ಭಿ-ರ್ವಿದ್ಯಾಯಾಂ ವಿಪ್ರವಾದಿನೀಂ ।
ಸೂಕ್ತಾದುಪೋದ್ಧರೇದೇನಂ ನಸೇಶ ಇತಿ ತು ದ್ವೃಚಂ ॥

ಉಪದಿಷ್ಠೇಯುಮೇಕೇಷಾಂ ಪುಂಸಃ ಕರ್ಮಣಿ ಪೌರುಷೇ ।

''ವಿ ಹಿ ಸೋ ತೋ'' ಎಂಬ ಸೂಕ್ತವನ್ನು ಸ್ನಾನಕಾಲದಲ್ಲಿ ಹೇಳಬೇಕು.

486 ರಕ್ಷೋಹಣಂ ವಾಜಿನಮಿತ್ಯೇ ತದ್ರಕ್ಷೋಹಣಂ ಜಪೇತ್ ||

487 ಅಗ್ನಿಂ ಪ್ರಜ್ವಾಲ್ಯ ಚೈತೇನ ಉಪತಿಷ್ಠೇತ ನಿತ್ಯಜಃ |
ಆಜ್ಯಾಹುತೀಶ್ಚ ಜುಹುಯಾತ್ತೇನ ರಕ್ಷಾಂಸಿ ಬಾಧತೇ ||

488 ಏತದ್ರಕ್ಷೋಹಣಂ ಶಾಂತಿಃ ಪರಮ್ಯೈಷಾ ಪ್ರಕೀರ್ತಿತಾ |

ರಾಕ್ಷಸಬಾಧಾನಿವೃತ್ತಿಗಾಗಿ ''ರಕ್ಷೋಹಣಂ'' ಸೂಕ್ತವು ಹೇಳಲ್ಪಟ್ಟಿದೆ. ಪ್ರತಿನಿತ್ಯ ಈ ಮಂತ್ರಗಳಿಂದ ಆಜ್ಯಾಹುತಿ ಕೊಟ್ಟು ಪ್ರಾರ್ಥಿಸಿದರೆ ಶಾಂತಿ ಉಂಟಾಗುತ್ತದೆ.

489 ಹವಿಷ್ಪಾಂತೀಯಮೇತತ್ತು ಸೂಕ್ತಮತ್ರ ಪ್ರಯೋಜಯೇತ್ |
ಗರ್ಹಿತಾನ್ನಾತ್ಪ್ರಯೋಗೇ ಚ ಹವಿಷ್ಪಾಂತೀಯಮಭ್ಯಸೇತ್ ||
ಪವಿತ್ರಂ ಪರಮಂ ಹ್ಯೇತತ್ ಧ್ಯಾತವ್ಯಂ ಚಾಪ್ಯಭೀಕ್ಷ್ಣಶಃ ||

490 ಆದಿತ್ಯೇ ದೃಷ್ಟಿಮಾಸ್ಥಾಯ ಷಣ್ಮಾಸಾನ್ನಿಯತೋ ಭವೇತ್ |
ದೇವಯಾನಂ ಸಪಂಥಾನಂ ಪಶ್ಯತ್ಯಾದಿತ್ಯಮಂಡಲೇ ||

491 ವಿದ್ಯಾ ವೈಶ್ವಾನರೀ ಚಾಸ್ಯ ಸ್ವಕಾಯಸ್ಥಾಪ್ರಕಾಶತೇ |
ಹವಿಷ್ಪಾಂತೀಯ ಮಭ್ಯಸ್ಯ ಸರ್ವಪಾಪೈಃ ಪ್ರಮುಚ್ಯತೇ ||

ಕುತ್ಸಿತಾನ್ನ ಭೋಜನ ಮಾಡಿದ ದೋಷ ಪ್ರಾಯಶ್ಚಿತ್ತಕ್ಕಾಗಿ ''ಹವಿಷ್ಪಾಂತೀಯ ಸೂಕ್ತವನ್ನು ಪಠಿಸಬೇಕು. ಇದೇ ಸೂಕ್ತವನ್ನು ಪ್ರತಿನಿತ್ಯ ಸೂರ್ಯನನ್ನು ನೋಡುತ್ತಾ 6 ತಿಂಗಳು ಪಠಿಸಿದರೆ ದೇವತೆಗಳು ಪ್ರತ್ಯಕ್ಷರಾಗುತ್ತಾರೆ. ವೈಶ್ವಾನರ ವಿದ್ಯೆಯು ವಶ ವಾಗುತ್ತದೆ. ಸರ್ವಪಾಪದಿಂದ ಮುಕ್ತಿ.

492 ಇಂದ್ರಂ ಸ್ತವೇತಿ ಸೂಕ್ತಂ ತು ಜಪೇಚ್ಛತ್ರುನಿಬರ್ಹಣಂ |
ಪವಿತ್ರಾಣಾಂ ಪವಿತ್ರಂ ಚ ಗುಹ್ಯಂ ಪಾವನಮದ್ಭುತಂ ||

''ಇಂದ್ರಸ್ತವಾ ನೃತಮಂ'' ಸೂಕ್ತವನ್ನು ಜಪಿಸಿದರೆ ಶತ್ರುನಾಶ.




## ಪುರುಷಸೂಕ್ತ ವಿಚಾರ

493 ಶುಕ್ಲಪಕ್ಷೇ ಶುಭೇವಾರೇ ಸುನಕ್ಷತ್ರೇ ಸುಗೋಚರೇ |
ದ್ವಾದಶ್ಯಾಂ ಪುತ್ರಕಾಮಾಯ ಚರುಂ ಕುರ್ವೀತ ವೈಷ್ಣವಂ ||

494 ದಂಪತ್ಯೋರುಪವಾಸಃ ಸ್ಯಾದೇಕಾದಶ್ಯಾಂ ಸುರಾಲಯೇ |
ಋಗ್ಭಿಃ ಷೋಡಶಭಿಃಸಮ್ಯಗರ್ಚಯಿತ್ವಾ ಜನಾರ್ದನಂ ||

495 ಚರುಂ ಪುರುಷಸೂಕ್ತೇನ ಶ್ರಪಯೇತ್ ಪುತ್ರಕಾಮ್ಯಯಾ |
ಪ್ರಾಪ್ನುಯಾದ್ ವೈಷ್ಣವಂ ಪುತ್ರಮಚಿರಾತ್ ಸಂತತಿ ಕ್ಷಮಂ ||

ಸಂತಾನಹೀನರಿಗೆ ಪುರುಷಸೂಕ್ತ ವಿಧಿಯು ಹೇಳಲ್ಪಟ್ಟಿದೆ. ದಂಪತಿಗಳು ಶುಭವಾದ ನಕ್ಷತ್ರಗಳಿಂದ ಕೂಡಿದ ಶುಕ್ಲಪಕ್ಷದ ಏಕಾದಶಿ ಉಪವಾಸವಿದ್ದು ದ್ವಾದಶಿಯಂದು ಹೋಮ ಮಾಡಿದರೆ ವಿಷ್ಣುವಿನ ಅಂಶವೇ ಇರುವ ಪುತ್ರ ಪ್ರಾಪ್ತಿ.

496 ದ್ವಾದಶ ದ್ವಾದಶೀಃ ಸಮ್ಯಕ್ ಪಯಸಾ ನಿರ್ವಪೇಚ್ಚರುಂ |
ಯಃ ಕರೋತಿ ಹ ಯಸ್ಥಸ್ಯಾದ್ಯಾತಿ ವಿಷ್ಣೋಃ ಪರಂ ಪದಂ ||

497 ಹುತ್ವಾಗ್ನಿಂ ವಿಧಿವತ್ ಸಮ್ಯಗೃಗ್ಭಿಃ ಷೋಡಶಭಿರ್ಬುಧಃ |
ಕೃತಾಂಜಲಿ ಪುಟೋ ಭೂತ್ವಾಸ್ತವಂ ತಾಭಿಃ ಪ್ರಯೋಜಯೇತ್ ||

498 ಕೇಶವಂ ಮಾರ್ಗಶೀರ್ಷೇ ತು ಪೌಷೇ ನಾರಾಯಣಂ ತಥಾ |
ಮಾಧವಂ ಮಾಘಮಾಸೇ ತುಗೋವಿಂದಂ ಫಾಲ್ಗುನೇ ಪುನಃ ||

499 ಚೈತ್ರೇ ಚೈವ ತಥಾ ವಿಷ್ಣುಂ ವೈಶಾಖೇ ಮಧುಸೂದನಂ |
ಜ್ಯೇಷ್ಠೇ ತ್ರಿವಿಕ್ರಮಂ ವಿದ್ಯಾದಾಷಾಢೇ ವಾಮನಂ ವಿದುಃ ||

500 ಶ್ರಾವಣೇ ಶ್ರೀಧರಂ ವಿದ್ಯಾದ್ಧೃಷೀಕೇಶಂ ತತಃ ಪರೇ |
ಅಶ್ವಿನೇ ಪದ್ಮನಾಭಂ ತು ದಾಮೋದರಂ ಚ ಕಾರ್ತಿಕೇ ||

501 ದ್ವಾದಶೈತಾನಿ ನಾಮಾನಿ ಋಷ್ಯಶೃಂಗೋ ಬ್ರವೀನ್ಮುನಿಃ।
ಪೂಜಯೇನ್ನಾಸನಾಮಾಭಿಃ ಸರ್ವಾನ್ ಕಾಮಾನ್ ಸಮಶ್ನುತೇ॥

502 ಆಯುಷ್ಮಂತಂ ಸುತಂ ಸೂತೇ ಪರಾ ಮೇಧಾ ಸಮನ್ವಿತಂ।
ಧನವಂತಂ ಪ್ರಜಾವಂತಂ ಧಾರ್ಮಿಕಂ ಸಾತ್ವಿಕಂ ತಥಾ॥

503 ಸಮಿಧೋಶ್ವತ್ಥ ವೃಕ್ಷಸ್ಯ ಹುತಾಗ್ನಿಂ ಜುಹುಯಾತ್ ಪುನಃ।
ಉಪಸ್ಥಾನಂ ಹುತಾಶಸ್ಯ ಧ್ಯಾತ್ವಾರ್ಚ್ಯ ಮಧುಸೂದನಂ॥

504 ಹವಿರ್ಹೋಮಂ ತತ: ಕುರ್ಯಾತ್ ಪ್ರತ್ಯೃಚಂ ವಾಗ್ಯತ: ಶುಚಿ:।
ಸೂಕ್ತೇನ ಜುಹುಯಾದಾಜ್ಯ-ಮಾದಾವಂತೇ ಚ ಪೂರ್ವವತ್॥

505 ಹವಿ:ಶೇಷಂ ನಮಸ್ಕೃತ್ವಾ ನಾರೀ ನಾರಾಯಣಂ ಪತಿಂ।
ಭಕ್ಷಯಿತ್ವಾ ಹವಿ:ಶೇಷಂ ಲಬ್ಧಾಶೀ: ಸಂವಿಶೇತ್ ಕ್ಷಣಂ॥

506 ತತಸ್ತು ಕೃತ್ವೇದಂ ಕರ್ಮ ಕರ್ತವ್ಯಂ ದ್ವಿಜತರ್ಪಣಂ।
ದ್ವಿತೀಯಂ ಸ್ತ್ರೀ ನಿವರ್ತೇತ ಯಾವದ್ ಗರ್ಭಂ ಚ ವಿಂದತಿ॥

507 ಅಪುತ್ರಾ ಮೃತಪುತ್ರಾವಾ ಯಾ ಚ ಕನ್ಯಾ: ಪ್ರಸೂಯತೇ।
ಕ್ಷಿಪ್ರಂ ಸಾ ಜನಯೇತ್ ಪುತ್ರಮೃಷ್ಯಶೃಂಗೋ ಯಥಾಬ್ರವೀತ್॥

೧೨ ದ್ವಾದಶಿಗಳಂದು ಹಾಲಿನ ಪಾಯಸದಿಂದ ವಿಷ್ಣುವನ್ನು ಕುರಿತು ಹೋಮ ಮಾಡಿದರೆ ವಿಷ್ಣು ಸಾಯುಜ್ಯವನ್ನೇ ಹೊಂದುತ್ತಾನೆ. ಮಾರ್ಗಶೀರ್ಷ ಮಾಸದಿಂದ ಪ್ರಾರಂಭಿಸಿ ಕೇಶವಾದಿ ದ್ವಾದಶ ನಾಮಗಳಿಂದ ಪ್ರತಿ ದ್ವಾದಶಿ (ಶುಕ್ಲಪಕ್ಷ) ಪೂಜಿಸಿ ಹೋಮಿಸಬೇಕು. ಈ ರೀತಿ ಅನುಷ್ಠಿಸಿದರೆ ಮೇಧಾವಿಯಾದ, ಆಯುಷ್ಮಂತನಾದ, ಧಾರ್ಮಿಕನಾದ ಪುತ್ರನು ಜನಿಸುತ್ತಾನೆ. ಹೋಮಕ್ಕೆ ಅಶ್ವತ್ಥ ಸಮಿತ್ತುಗಳನ್ನು ಉಪಯೋಗಿಸಬೇಕು. ಹವಿ:ಶೇಷವನ್ನೇ ಭಕ್ಷಿಸಬೇಕು. ಹೋಮಾನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.





508 ಅರ್ಚನಂ ಸಂಪ್ರವಕ್ಷ್ಯಾಮಿ ವಿಷ್ಣೋರಮಿತತೇಜಸ:।
ಯತ್ ಕೃತ್ವಾ ಮನಯ: ಸರ್ವೇ ಬ್ರಹ್ಮನಿರ್ವಾಣಮಾಪ್ನುಯು:॥

ಮೋಕ್ಷಪ್ರಾಪ್ತಿಗಾಗಿ ಪುರುಷ ಸೂಕ್ತದ ಅನುಷ್ಠಾನ ವಿಧಿಯನ್ನು ಈಗ ಹೇಳುತ್ತೇನೆ. ಋಷಿಗಳೆಲ್ಲರೂ ಇದರ ಅನುಷ್ಠಾನದಿಂದಲೇ ಮೋಕ್ಷಹೊಂದಿದರು.

509 ಅಪ್ಸ್ವಗ್ನೌ ಹೃದಯೇ ಸೂರ್ಯೇ ಸ್ಥಂಡಿಲೇ ಪ್ರತಿಮಾಸು ಚ।
ಷಟ್ ಸ್ವೇತೇಷು ಹರೇ: ಸಮ್ಯಗರ್ಚನಂ ಮುನಿಭಿ: ಸ್ಮೃತಂ॥

ವಿಷ್ಣುವನ್ನು ನೀರು, ಅಗ್ನಿ,ಹೃದಯ, ಸೂರ್ಯ,ಸ್ಥಂಡಿಲ, ಪ್ರತಿಮೆಗಳಲ್ಲಿ ಆರಾಧಿಸಬೇಕು.

510 ಅಗ್ನೌ ಕ್ರಿಯಾವತಾಂ ದೇವೋ ದಿವಿ ದೇವೋ ಮನೀಷಿಣಾಂ।
ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿ:॥

ಕರ್ಮಠರು ಅಗ್ನಿಯಲ್ಲೂ, ದೇವತೆಗಳು ಮನಸ್ಸಿನಲ್ಲೂ, ಯೋಗಿಗಳು ಹೃದಯದಲ್ಲೂ, ಸಾಧಾರಣ ಮನುಷ್ಯರು ಪ್ರತಿಮೆಗಳಲ್ಲೂ ವಿಷ್ಣುವನ್ನು ಕಾಣುತ್ತಾರೆ.

511 ಆಪೋ ಹ್ಯಾಯತನಂ ತಸ್ಯ ತಸ್ಮಾತ್ತಾಸು ಸದಾ ಹರಿಃ।
ತಸ್ಯ ಸರ್ವಗತತ್ವಾಚ್ಚ ಸ್ಥಂಡಿಲೇ ಭಾವಿತಾತ್ಮನಾಂ॥

512 ದದ್ಯಾತ್ ಪುರುಷಸೂಕ್ತೇನ ಯಃ ಪುಷ್ಪಾಣ್ಯಪ ಏವ ವಾ।
ಅರ್ಚಿತಂ ಸ್ಯಾಜ್ಜಗದಿದಂ ತೇನ ಸರ್ವಂ ಚರಾಚರಂ॥

ನೀರೇ ವಿಷ್ಣುವಿಗೆ ಆಶ್ರಯ. ಆದ್ದರಿಂದ ನೀರಿನಲ್ಲೇ ಹರಿಯನ್ನು ಭಾವಿಸಿ ಪುರುಷಸೂಕ್ತದಿಂದ ನೀರನ್ನು,ಹೂಗಳನ್ನು ಹರಿಗೆ ಅರ್ಪಿಸಬೇಕು.

513 ಆನುಷ್ಟುಭಸ್ಯ ಸೂಕ್ತಸ್ಯ ತ್ರಿಷ್ಟುಬಂತಸ್ಯ ದೇವತಾ।
ಪುರುಷೋಥ ಜಗದ್ ಬೀಜ-ಮೃಷಿರ್ನಾರಾಯಣಃ ಸ್ಮೃತಃ॥

ನಾರಾಯಣ ಋಷಿಯೇ ಈ ಸೂಕ್ತದ ದ್ರಷ್ಟಾರ. ಪುರುಷನೇ ದೇವತೆ. ಅನುಷ್ಟುಪ್ ಛಂದಸ್ಸು. ಕೊನೆಯ ಮಂತ್ರ ತ್ರಿಷ್ಟುಪ್ ಛಂದಸ್ಸು.

514 ನಾರಾಯಣ ಮಹೋಬಾಹೋ ಶೃಣುಷ್ವೈಕಂ ಮಹಾಪ್ರಭೋ ।
ವಕ್ಷ್ಯೇ ಪುರುಷಸೂಕ್ತಸ್ಯ ವಿಧಾನಂ ತ್ವರ್ಚನಂ ಪ್ರತಿ ॥

515 ಅಗ್ನಿಕಾರ್ಯಂ ಜಪ ವಿಧಿಂ ಸ್ತೋತ್ರಂ ಚೈವ ತದಾತ್ಮಕಂ ।
ಸ್ನಾತ್ವಾ ಯಥೋಕ್ತ ವಿಧಿನಾ ಪ್ರಾಙ್ಮುಖಃ ಶುದ್ಧಮಾನಸಃ ॥

516 ಪ್ರಥಮಾಂ ವಿನ್ಯಸೇದ್ವಾಮೇ ದ್ವಿತೀಯಂ ದಕ್ಷಿಣೇ ಕರೇ ।
ತೃತೀಯಾಂ ವಾಮಪಾದೇ ತು ಚತುರ್ಥೀಂ ದಕ್ಷಿಣೇ ನ್ಯಸೇತ್ ॥

517 ಪಂಚಮೀಂ ವಾಮಜಾನುನಿ ಷಷ್ಠೀ ವೈ ದಕ್ಷಿಣೇ ನ್ಯಸೇತ್।
ಸಪ್ತಮೀಂ ವಾಮಕುಕ್ಷೌತು ಅಷ್ಟಮೀಂ ದಕ್ಷಿಣೇ ನ್ಯಸೇತ್ ॥

518 ನವಮೀಂ ನಾಭಿದೇಶೇ ತು ದಶಮೀಂ ಹೃದಯೇ ನ್ಯಸೇತ್
ಏಕಾದಶೀಂ ಕಂಠದೇಶೇ ದ್ವಾದಶೀ. ವಾಮಬಾಹುಕೇ ॥

519 ತ್ರಯೋದಶೀಂ ದಕ್ಷಿಣೇ ಚ ಆಸ್ಯೇ ಚೈವ ಚತುರ್ದಶೀಂ ।
ಅಕ್ಷ್ಣೋಃ ಪಂಚದಶೀಂ ಚೈವ ಷೋಡಶೀಂ ಮೂರ್ಧ್ನಿ ವಿನ್ಯಸೇತ್ ॥

520 ಏವಂ ನ್ಯಾಸವಿಧಿಂ ಕೃತ್ವಾ ಪಶ್ಚಾತ್ ಪೂಜಾಂ ಸಮಾರಭೇತ್ ।
ಯಥಾ ದೇಹೇ ತಥಾ ದೇವೇ ನ್ಯಾಸಂ ಕೃತ್ವಾ ವಿಧಾನತಃ ॥

ಪುರುಷಸೂಕ್ತದ ಅರ್ಚನ ವಿಧಿಯನ್ನು ಈಗ ಹೇಳುತ್ತೇವೆ. ಜಪವಿಧಿಯಲ್ಲಿ ಮೊದಲನೇ ಮಂತ್ರದಿಂದ ಉಪಕ್ರಮಿಸಿ ಕ್ರಮವಾಗಿ ಕೈಗಳು, ಕಾಲುಗಳು, ಜಾನು, ಪಕ್ಕೆಲುಬು, (ಮೊದಲು ಎಡ ನಂತರ ಬಲ) ನಂತರ ನಾಭಿ, ಹೃದಯ, ಕಂಠ, ಬಾಹುಗಳು, ಬಾಯಿ, ಕಣ್ಣುಗಳು, ತಲೆ- ಈ ರೀತಿ ನ್ಯಾಸ ಮಾಡಬೇಕು.

521 ಆದ್ಯಮಾವಾಹಯೇದ್ದೇವ- ಮೃಚಾ ತು ಪುರುಷೋತ್ತಮಂ ।
ದ್ವಿತೀಯಯಾಸನಂ ದದ್ಯಾತ್ ಪಾದ್ಯಂ ಚೈವ ತೃತೀಯಯಾ ॥





522 ಅರ್ಘ್ಯಂ ಚತುರ್ಥ್ಯಾ ದಾತವ್ಯಂ ಪಂಚಮ್ಯಾಚಮನೀಯಕಂ ।
ಷಷ್ಠ್ಯಾ ಸ್ನಾನಂ ಪ್ರಕುರ್ವೀತ ಸಪ್ತಮ್ಯಾ ವಸ್ತ್ರಮೇವ ತು ॥

523 ಯಜ್ಞೋಪವೀತ ಮಷ್ಟಮ್ಯಾ ನವಮ್ಯಾ ಚಾನುಲೇಪನ ।
ಪುಷ್ಪಂ ದಶಮ್ಯಾ ದಾತವ್ಯ - ಮೇಕಾದಶ್ಯಾ ತು ಧೂಪಕಂ ॥

524 ದ್ವಾದಶ್ಯಾ ದೀಪಕಂ ದದ್ಯಾತ್ ತ್ರಯೋದಶ್ಯಾ ನಿವೇದನಂ ।
ಚತುರ್ದಶ್ಯಾ ನಮಸ್ಕಾರಂ ಪಂಚದಶ್ಯಾ ಪ್ರದಕ್ಷಿಣಾಂ ॥

525 ದಕ್ಷಿಣಾ ತು ಯಥಾಶಕ್ತಿ ಷೋಡಶ್ಯಾಚ ಪ್ರದಾಪಯೇತ್ ।
ಸ್ನಾನೇ ವಸ್ತ್ರೇ ಚ ನೈವೇದ್ಯೇ ದದ್ಯಾದಾಚಮನೀಯಕಂ ॥

526 ತತಃ ಪ್ರದಕ್ಷಿಣಾಂ ಕೃತ್ವಾ ಜಪಂ ಕುರ್ಯಾತ್, ಸಮಾಹಿತಃ ।
ಯಥಾಶಕ್ತಿ ಜಪಿತ್ವಾತು ಸೂಕ್ತಂ ತಸ್ಮೈ ನಿವೇದಯೇತ್ ॥

ಮೊದಲನೇ ಮಂತ್ರದಿಂದ ಆವಾಹನೆ ಮಾಡಿ ನಂತರ ಪ್ರತಿಯೊಂದು ಮಂತ್ರದಿಂದ ಕ್ರಮವಾಗಿ ಆಸನ, ಪಾದ್ಯ ,ಅರ್ಘ್ಯ, ಆಚಮನ, ಸ್ನಾನ, ವಸ್ತ್ರ ಯಜ್ಞೋಪವೀತ, ಗಂಧ, ಪುಷ್ಪ, ಧೂಪ, ದೀಪ,ನೈವೇದ್ಯ, ನಮಸ್ಕಾರ, ಪ್ರದಕ್ಷಿಣ, ದಕ್ಷಿಣೆ - ಈ 16 ಉಪಚಾರ ಅರ್ಪಿಸಬೇಕು. ಸ್ನಾನ, ವಸ್ತ್ರ ನೈವೇದ್ಯಾನಂತರ ಆಚಮನ ಅರ್ಪಿಸಬೇಕು, ನಂತರ ಯಥಾಶಕ್ತಿ ಜಪ ಮಾಡಬೇಕು.

527 ದೇವಸ್ಯ ದಕ್ಷಿಣೇ ಪಾರ್ಶ್ವೇ ಕುಂಡಂ ಸ್ಥಂಡಿಲಮೇವ ವಾ ।
ಕಾರಯೇತ್ ಪ್ರಥಮೇನೈವ ದ್ವಿತೀಯೇನ ತು ಪ್ರೋಕ್ಷಣಂ ॥

528 ತೃತೀಯಯಾಗ್ನಿಮಾದಧ್ಯಾ- ಚ್ಚತುರ್ಥ್ಯಾ ಚ ಸಮಿಂಧನಂ ।
ಪಂಚಮ್ಯಾಜ್ಯಸ್ಯ ಶ್ರಪಣಂ ಚರೋಶ್ಚ ಶ್ರಪಣಂ ತಥಾ ॥

529 ಷಷ್ಠೇನೈವಾಗ್ನಿಮಧ್ಯೇ ತು ಕಲ್ಪಯೇತ್ ಪದ್ಮಮಾಸನಂ ।
ಚಿಂತಯೇದ್ ದೇವದೇವೇಶಂ ಕಾಲಾನಲ ಸಮಪ್ರಭಂ ॥

530 ತತೋಗಂಧಂ ಚ ಪುಷ್ಪಂ ಚ ಧೂಪದೀಪ ನಿವೇದನಂ।
ಅನುಜ್ಞಾಪ್ಯ ತತಃ ಕುರ್ಯಾತ್ ಸಪ್ತಮ್ಯಾದಿ ಯಥಾಕ್ರಮಂ॥

531 ಸಮಿಧಸ್ತಾವತೀಃ ಪೂರ್ವಂ ಜುಹುಯಾದಭಿಧಾರಿತಾಃ।
ತತೋ ಘೃತೇನ ಜುಹುಯಾಚ್ಚರುಣಾ ಚ ತತಃ ಪುನಃ॥

532 ಏವಂ ಹುತ್ವಾ ತತಶ್ಚೈವ -ಮನುಜ್ಞಾಪ್ಯ ಯಥಾಕ್ರಮಂ।
ಅಗ್ನೇರ್ಭಗವತಸ್ತಸ್ಯ ಸಮೀಪೇ ಸ್ತೋತ್ರಮುಚ್ಚರೇತ್॥

ಹೋಮವಿಧಿಯಲ್ಲಿ ಪುರುಷಸೂಕ್ತದ ವಿನಿಯೋಗವನ್ನು ಈಗ ಹೇಳುತ್ತಾರೆ. ಮೊದಲನೇ ಮಂತ್ರದಿಂದ ಕುಂಡಸ್ಥಾಪನೆ. 2ನೇ ಮಂತ್ರದಿಂದ ಪ್ರೋಕ್ಷಣೆ,ಮೂರರಿಂದ ಅಗ್ನ್ಯಾಧಾನ, ನಂತರ ಕ್ರಮವಾಗಿ ಸಮಿಂಧನ, ಆಜ್ಯಸಂಸ್ಕಾರ, ಚರುಸಂಸ್ಕಾರ, ಗಂಧ, ಪುಷ್ಪ ಧೂಪ, ದೀಪ, ನೈವೇದ್ಯಗಳನ್ನೂ ಅರ್ಪಿಸಬೇಕು.ನಂತರ ಪೂರ್ವೋಕ್ತ ರೀತ್ಯಾ ಹೋಮ ಮಾಡಿ ಹೀಗೆ ಸ್ತುತಿಸಬೇಕು.

533 ಜಿತಂ ತೇ ಪುಂಡರೀಕಾಕ್ಷನಮಸ್ತೇ ವಿಶ್ವಭಾವನ।
ಸುಬ್ರಹ್ಮಣ್ಯ ನಮಸ್ತೇಸ್ತು ಮಹಾಪುರುಷ ಪೂರ್ವಜ॥

534 ನಮೋ ಹಿರಣ್ಯಗರ್ಭಾಯ ಪ್ರಧಾನಾವ್ಯಕ್ತರೂಪಿಣೇ।
ಓಂ ನಮೋ ವಾಸುದೇವಾಯ ಶುದ್ಧ ಜ್ಞಾನ ಸ್ವರೂಪಿಣೇ॥

535 ದೇವಾನಾಂ ದಾನವಾನಂ ಚ ಸಾಮಾನ್ಯಮಸಿ ದೈವತಂ।
ಸರ್ವದಾ ಚರಣಂ ದ್ವಂದ್ವಂ ವ್ರಜಾಮಿ ಶರಣಂ ತವ॥

536 ಏಕಸ್ತ್ವಮಸಿ ಲೋಕಸ್ಯ ಸ್ರಷ್ಟಾ ಸಂಹಾರಕಸ್ತಥಾ।
ಅಧ್ಯಕ್ಷಶ್ಚಾನುಮಂತಾ ಚ ಗುಣ ಮಾಯಾ ಸಮಾವೃತಃ॥

537 ಸಂಸಾರಸಾಗರಂ ಘೋರ ಮನಂತಂ ಕ್ಲೇಶಭಾಜನಂ।
ತ್ವಾಮೇವ ಶರಣಂ ಪ್ರಾಪ್ಯ ನಿಸ್ತರಂತಿ ಮನೀಷಣಃ॥


shrinath.udupa@gmail.com


538 ನತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ।
ತಥಾಪಿ ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ।

539 ನೈವ ಕಿಂಚಿತ್ ಪರೋಕ್ಷಂ, ತೇ ನ ಕ ಪ್ರತ್ಯಕ್ಷೋಸಿ ಕಸ್ಯಚಿತ್।
ನೈವ ಕಿಂಚಿದಸಾಧ್ಯಂ ತೇ ನ ಚ ಸಾಧ್ಯೋಸಿ ಕಸ್ಯಚಿತ್॥

540 ಕಾರ್ಯಾಣಾಂ ಕಾರಣಂ ಪೂರ್ಣಂ ವಚಸಾಂ ವಾಚ್ಯ ಮುತ್ತಮಂ
। ಯೋಗಿನಾಂ ಪರಮಾಂ ಸಿದ್ಧಿಂ ವಿದಂತಿ ಪರಮಂ ವಿದಃ॥

541 ಅಹಂ ಭೀತೋಸ್ಮಿ ದೇವೇಶ ಸಂಸಾರೇಽಸ್ಮಿನ್ ಮಹಾಭಯೇ।
ತ್ರಾಹಿ ಮಾಂ ಪುಂಡರೀಕಾಕ್ಷ ನ ಜಾನೇ ಶರಣಂ ಪರಂ॥

542 ಕಾಲೇಷ್ವಪಿ ಚ ಸರ್ವೇಷು ದಿಕ್ಷು ಸರ್ವಾಸು ಚಾಚ್ಯುತ।
ಶರೀರೇ ವಿಗತೇ ವಾಪಿ ವರ್ತತೇ ಮೇ ಮಹದ್‌ಭಯಂ॥

543 ತ್ವತ್ ಪಾದಕಮಲಾದನ್ಯ - ನ್ನ ಮೇ ಜನ್ಮಾಂತರೇಷ್ವಪಿ।
ನಿಮಿತ್ತಂ ಕುಶಲಸ್ಯಾಸ್ತಿ ಯೇನ ಗಚ್ಛಾಮಿ ಸದ್ಗತಿಂ॥

544 ವಿಜ್ಞಾನಂ ಯದಿದಂ ಪ್ರಾಪ್ತಂ ಯದಿದಂ ಜ್ಞಾನಮರ್ಜಿತಂ।
ಜನ್ಮಾಂತರೇಪಿ ಮೇ ದೇವ ಮಾ ಭೂದಸ್ಯ ಪರಿಕ್ಷಯಃ॥

545 ದುರ್ಗತಾವಪಿ ಜಾತಸ್ಯ ತ್ವದ್ಗತೋ ಮೇ ಮನೋರಥಃ। ಯದಿ
ನಾಥಂ ಚ ವಿಂದೇಯ ತಾವತಾಸ್ಮಿ ಕೃತೀ ಸದಾ॥

546 ಅಕಾಮಕಲುಷಂ ಚಿತ್ತಂ ಮಮತೇ ಪಾದಯೋಃ ಸ್ಥಿತಂ।
ಕಾಮಯೇ ವಿಷ್ಣುಪಾದೌ ತು ಸರ್ವಜನ್ಮಸು ಕೇವಲಂ॥

547 ಪುರುಷಸ್ಯ ಹರೇಃ ಸೂಕ್ತಂ ಸ್ವರ್ಗ್ಯಂ ಧನ್ಯಂ ಯಶಸ್ಕರಂ।
ಆತ್ಮಜ್ಞಾನಮಿದಂ ಪುಣ್ಯಂ ಯೋಗಜ್ಞಾನಮಿದಂ ಪರಂ॥

548 ಇತ್ಯೇವ ಮನಯಾ ಸ್ತುತ್ವಾ ಸ್ತುತ್ವಾ ದೇವಂ ದಿನೇ ದಿನೇ
ಕಿಂಕರೋಸ್ಮೀತಿ ಚಾತ್ಮಾನಂ ದೇವಾಯೈವ ನಿವೇದಯೇತ್॥

ಪುಂಡರಿಕಾಕ್ಷ, ಸುಬ್ರಹ್ಮಣ್ಯ, ಮಹಾಪುರುಷ ನಿನಗೆ ನಮಸ್ಕಾರ. ಹಿರಣ್ಯಗರ್ಭ, ಅವ್ಯಕ್ತರೂಪ, ವಾಸುದೇವ ನಿನಗೆ ನಮನಗಳು. ಶುದ್ಧ ಜ್ಞಾನಸ್ವರೂಪ, ನಿನ್ನ ಪದದ್ವಂದ್ವಗಳಿಗೆ ಶರಣು. ಸೃಷ್ಟಿ ಸ್ಥಿತಿಲಯಕರ್ತಾ ನೀನೆ. ಮಾಯಾವಿಲಾಸಿ, ಈ ಘೋರಸಂಸಾರ. ದಾಟಲು ನಿನ್ನನ್ನೇ ಶರಣು ಹೊಂದುತ್ತೇವೆ. ನಿನಗೆ ರೂಪ, ಆಕಾರಗಳಿಲ್ಲ ಆದರೂ ಪುರುಷಾಕಾರದಿಂದ ಪ್ರಕಾಶಿಸುತ್ತಿ. ನಿನಗೆ ಅಸಾಧ್ಯವಾದದ್ದು ಯಾವುದೂ ಇಲ್ಲ. ಎಲ್ಲ ಕಾರ್ಯಗಳಿಗೂ ನೀನೇ ಕಾರಣ. ಯೋಗಿಗಳು ಪರಮ ಪದವಾದ ನಿನ್ನನ್ನೇ ಹೊಂದುತ್ತಾರೆ. ಈ ಸಂಸಾರದ ಭಯದಿಂದ ಕಂಗೆಟ್ಟಿರುವ ನನ್ನನ್ನು ಕಾಪಾಡು ದೇವ.

549 ಫಲಾಹಾರೋ ಭವೇನ್ಮಾಸಂ ಪಶ್ಯತ್ಯಾತ್ಮಾನ ಮಾತ್ಮನಿ ।
ಫಲಾನಿ ಭುಕ್ತ್ವೋಪವಸೇ ನ್ಮಾಸ ಮದ್ಭಿಶ್ಚ ವರ್ತಯೇತ್॥

550 ಅರಣ್ಯೇ ನಿವಸೇನ್ನಿತ್ಯಂ ಜಪನ್ನೇತಮೃಷಿ ಸದಾ ॥

551 ತ್ರಿಸ್ತ್ರಿಷವಣ ಕಾಲೇಷು ಸ್ನಾಯಾದಪ್ಸು ಸಮಾಹಿತಃ ।
ಆದಿತ್ಯಮುಪತಿಷ್ಠೇತ ಸೂಕ್ತೇನಾನೇನ ನಿತ್ಯಶಃ ॥

552 ಆಜ್ಯಾಹುತೀ ರನೇನೈವ ಹುತ್ವೈತಂ ಚಿಂತಯೇದೃಷಿಂ ।
ಊರ್ಧ್ವಂ ಮಾಸಾತ್ ಫಲಾಹಾರ-ಸ್ತ್ರಿಭಿರ್ವರ್ಷೈರ್ಜಯೇದ್ದಿವಂ ॥

553 ತದ್ಭಕ್ತಸ್ತನ್ಮನಾಯುಕ್ತೋ ದಶವರ್ಷಾಣ್ಯನನ್ಯ ಭಾಕ್ ।
ಸಾಕ್ಷಾತ್ ಪಶ್ಯತಿ ತಂದೇವಂ ನಾರಾಯಣಮನಾಮಯಂ ॥

ಈ ಪ್ರಕಾರವಾಗಿ ಸ್ತುತಿಸುತ್ತಾ ಒಂದು ತಿಂಗಳು ಫಲಾಹಾರಿಯಾಗಿ, ಒಂದು ತಿಂಗಳು ಕೇವಲ ನೀರನ್ನೇ ಸೇವಿಸುತ್ತಾ ಅರಣ್ಯವಾಸಿಯಾಗಿ ಜಪಿಸುತ್ತಿರಬೇಕು. ಮೂರು ಕಾಲಗಳಲ್ಲೂ ಸ್ನಾನ ಮಾಡುತ್ತಾ ಪುರುಷಸೂಕ್ತ ಜಪ ಮಾಡಬೇಕು. ಹಾಗೂ ಹೋಮ ಮಾಡಬೇಕು. ಹೀಗೆ 10 ವರ್ಷಗಳು ಆಚರಿಸಿದರೆ ಸಾಕ್ಷಾತ್ ಮಹಾವಿಷ್ಣುವು ಪ್ರತ್ಯಕ್ಷನಾಗುತ್ತಾನೆ.




554. ಗ್ರಾಹ್ಯಮತ್ಯಂತ ಯತ್ನೇನ ತ್ವಷ್ಟಾರಂ ಜಗತೋಽವ್ಯಯಂ ।
ಗೃಹಸ್ಥಧರ್ಮೇ ವರ್ತೇತ ನ್ಯಾಯವೃತ್ತಃ ಸಮಾಹಿತಃ ॥

555. ಏತದೇವಂ ಚಿಂತಯೇತ ನಾರಾಯಣಮನಾಮಯಂ ॥
ಅರ್ಧರಾತ್ರೇ ತ್ಯಕ್ತನಿದ್ರ ಉತ್ಥಾಯ ಶುಚಿವಾಗ್ಯತಃ॥

556. ಸಂಪ್ರಸುಪ್ತೇಷು ಸೂತೇಷು ಯೋಗಂ ಯುಂಜೀತ ಯೋಗವಿತ್ ।
ಋಜ್ವಾಸೀನಃ ಸಮೇದೇಶೇ ನಿರ್ವಾತೇ ಶಬ್ದವರ್ಜಿತೇ ॥

557 ಸವ್ಯಪಾದಂ ದಕ್ಷಿಣಸ್ಯಾಂ ಜಾನುನಿ ಶ್ಲೇಷಯೇತ್ತತಃ ।
ಸಂಹೃತ್ಯ ದಕ್ಷಿಣಂ ಪಾದಂ ಸವ್ಯೇ ಜಾನುನಿ ಯಚ್ಛತಿ ॥

558 ಬ್ರಹ್ಮಾಂಜಲಿಕೃತಃ ಸ್ವಸ್ಥೋ ಯೋಗ ಸಂಮೀಲಿತೇಕ್ಷಣಃ ।
ಓಮಿತ್ಯುಕ್ತ್ವಾ ಸ್ವಹೃದಯಂ ಚಿಂತಯೇದವಿಕುತ್ಸಿತಃ ॥

559 ತತ್ರಾತ್ಮಾನಂ ಸಮಾದಧ್ಯಾ - ದಿಂದ್ರಿಯಾಣಿ ಮನಸ್ತಥಾ ।
ನ ಚ ಬುಧ್ಯೇತ ಕಿಂಚಾನ್ಯ - ನ್ನ ಪಶ್ಯೇಚ್ಛೃಣುಯಾನ್ನ ಚ॥

560 ನ ನಮಸ್ಯೇತ್ ಸದಾ ಯೋಗಂ ತದಾ ಪ್ರಾಪ್ತಃ ಸ ಉಚ್ಯತೇ।
ಹೃದ್ಯೇ ತಮೃಷಿಮಭ್ಯಸ್ಯೇತ್ ಪಶ್ಯನ್ನೇವ ಯಥಾಶ್ರುತಿ॥

561 ಪ್ರಾಣಾನಾಯಮ್ಯ ಚಾಸೀನೋ ಯಾವಚ್ಚಿತ್ತಂ ತದರ್ಪಿತಂ।
ಉಚ್ಛ್ವಸಿಷ್ಯತ್ಯ ಧೋ ನಾಭಿಗಮಯಿತ್ವಾ ಮನಸ್ತಥಾ॥

562 ಉಚ್ಛ್ವಸೇ ದೇವಮಸಕೃತ್ ತನ್ಮನಾ ಯೋಗಮುನ್ನಯೇತ್।
ಏವಂ ಹಿ ಯುಂಜ್ಯಾತ್ ಸಾಮಾನ್ಯಂ ನ ಪಶ್ಯೇಚ್ಛೃಣುಯಾನ್ನಚ ॥

563 ತದಾಶನೈರ್ನಿಯಚ್ಛೇತ ಹೃದಯಾದೂರ್ಧ್ವಮೇವ ತು।
ಸಮೌ ತು ಜಾನೂ ಚಾಸ್ಯಂ ಚ ನಾಸಿಕಾನಯನೇ ಭ್ರುವೌ ॥

564 ಭ್ರುವೋರ್ಮಧ್ಯೇ ಪರಂ ಸ್ಥಾನಂ ತತ್ರೈತದ್ಧಾರಯೇತ್ ಸ್ಥಿರಂ ।
ಲಲಾಟದೇಶೇ ಧಾರ್ಯಾಥ ಮೂರ್ಧಾನಂ ಗಮಯೇತ್ತತಃ॥

565 ಉಚ್ಛ್ವಸಂಶ್ಚ ಯಥಾಕಾಲಂ ನಾಭಿತಶ್ಚೋಚ್ಛ್ವಸೇತ್ ಪುನಃ।
ಏತತ್ ಪರಂ ಸ್ಥಾನಮುಕ್ತಂ ಬ್ರಹ್ಮಣಃ ಪರಮಾತ್ಮನಃ॥

566 ಏವಂ ಯುಕ್ತೋ ಮಹಾತ್ಮಾ ಸನ್ ಮಹಾತ್ಮಾನಂ ಪ್ರಪದ್ಯತೇ।
ಯದಿಸ್ಯಾತ್ ಸುಕೃತೀ ಶುದ್ಧೋ ಯದಿ ವಾ ಪಾಪಕೃತ್ತಮಃ॥

567 ಉಪಲಭ್ಯ ಪರಂಬ್ರಹ್ಮ ಗತಿಂ ಜ್ಞಾತ್ವಾ ಭವೇಚ್ಛುಚಿಃ।
ಸರ್ವಪಾಪಾವ ಬದ್ಧಶ್ಚೇತ್ ಬುದ್ಧ್ವೈತತ್ ಪ್ರಯತೋ ಜಪೇತ್॥

568 ಅಪಿ ಜಿಜ್ಞಾಸ ನಾದೇವ ಗಚ್ಛೇತ ಪರಮಾಂ ಗತಿಂ।
ಧಾರಣಾತ್ತು ಪೃಥಕ್ಕುರ್ಯಾತ್ ಧರ್ಮೇಣಾನೇನ ನಿತ್ಯಶಃ॥

569 ಆದಿತ್ಯೇಗ್ನೌ ಚಂದ್ರಮಸಿ ವೃಕ್ಷಾಗ್ರೇಷು ಚ ಧಾರಯೇತ್।
ಪರ್ವತಾಗ್ರೇ ಸಮುದ್ರೇ ವಾ ಯತ್ರ ವಾಪಿ ಮನೋರಮೇತ್॥

570 ನತ್ವೇವ ವಿಷಯಾನ್ ಪ್ರಾಪ್ಯ ಧಾರಯೀಸತ ಕಥಂ ಚನ।
ಬಹ್ವತ್ರ ದುಃಖಂ ಜಾನೀಯಾತ್ ಪ್ರಧ್ವಸೇನ್ಮರಣೇ ಸತಿ ॥

571 ಧಾರ್ಮಿಕಾಣಾಂ ಕುಲೇ ಷುದ್ಧೇ ಯೋಗಭ್ರಷ್ಟೋಭಿ ಜಾಯತೇ।
ಮೂರ್ಧ್ನಿ ಬ್ರಹ್ಮ ಸ ವಿಂದೇತ ಸ ಏವ ಋಷಿಸತ್ತಮಃ ॥

572 ತದಾ ಮೂರ್ಧ್ನಃ ಪರಂಜ್ಯೋತಿ -ರ್ನಕ್ಷತ್ರ ಪಥಮುನ್ನಯೇತ್।
ಯೋಗೀ ಯೋಗೇಶ್ವರಂ ಪ್ರಾಪ್ಯ ನಿರ್ದ್ವಂದ್ವ: ಪರಮಾತ್ಮವಿತ್॥

573 ಸರ್ವತ್ರೈವಾತ್ಮನಾತ್ಮಾನಂ ಪಶ್ಯೇದೃಷಿ ಪರಾಯಣಃ।
ಜಪೇಚ್ಚೈವ ಸದಾ ಸ್ನಾತಃ ಪವಿತ್ರಮಿದಮುತ್ತಮಂ॥

574 ಅಪಿ ಪಾತಕಸಂಯುಕ್ತಃ ಕಾಲೇನ ಸುಕೃತೀ ಭವೇತ್।
ಯೇನ ಯೇನ ಚ ಕಾಮೇನ ಜಪೇದಿದಮೃಷಿಂ ಸದಾ ॥

575 ಸ ಸಕಾಮಃ ಸಮೃದ್ಧಃ ಸ್ಯಾತ್ ಶ್ರದ್ದಧಾನಸ್ಯ ಕುರ್ವತಂ।
ಹೋಮಂ ವಾಪ್ಯಥ ವಾ ಜಾಪ್ಯ -ಮುಪಹಾರಮಥೋ ಚರುಂ ॥

shrinath.udupa@gmail.com


576 ಕುರ್ವೀತ ಯೇನ ಕಾಮೇನ ತತ್ ಸಿದ್ಧಿಮವ ಧಾರಯೇತ್।
ಜ್ಞಾತಿಶ್ರೈಷ್ಠ್ಯಂ ಮಹದ್ವಿತ್ತಂ ಯಶೋ ಲೋಕೇ ಪರಾಂ ಗತಿಂ ॥

577 ಪಾಪೇನ ವಿಪ್ರ ಮೋಕ್ಷಸ್ತು ತತ್ ಸಿದ್ಧಿಮವಧಾರಯೇತ್।
ಜ್ಞಾನಗಮ್ಯಂ ಪರಂ ಸೂಕ್ಷ್ಮಂ ವ್ಯಾಪ್ಯ ಸರ್ವಂ ವ್ಯವಸ್ಥಿತಂ
ಗ್ರಾಹ್ಯಮತ್ಯಂತಯತ್ನೇನ ಬ್ರಹ್ಮಾಭ್ಯೇತಿ ಸನಾತನಂ ॥

ಗೃಹಸ್ಥಧರ್ಮವನ್ನು ಸರಿಯಾಗಿ ಪಾಲಿಸುತ್ತಾ ಅರ್ಧ ರಾತ್ರಿಯಲ್ಲಿ ಶುಚಿಯಾಗಿ, ಮೌನಿಯಾಗಿ ನಾರಾಯಣನನ್ನು ಧ್ಯಾನಿಸಬೇಕು. ಧ್ಯಾನಕಾಲದಲ್ಲಿ ಪದ್ಮಾಸನ ಸೂಕ್ತ, ನಂತರ ಬ್ರಹ್ಮಾಂಗಲಿಬದ್ಧನಾಗಿ ''ಓಂಕಾರ''ವನ್ನು ಜಪಿಸಬೇಕು. ಪ್ರಾಣಾಯಾಮ ಮಾಡಿ ಪ್ರಸನ್ನ ಚಿತ್ತನಾಗಿ ಜಪಿಸುವುದು ಉತ್ತಮ. ಹೃದಯ, ಮುಖ, ನಾಸಿಕ, ಕಣ್ಣು, ಹುಬ್ಬು, ಭ್ರೂಮಧ್ಯ, ಹಣೆ, ತಲೆ ಹೀಗೆ ಕ್ರಮವಾಗಿ ಆಯಾ ಸ್ಥಾನಗಳಲ್ಲಿ ಮನಸ್ಸನ್ನು, ಪ್ರಾಣವನ್ನು ಕೇಂದ್ರಿಕರಿಸಬೇಕು. ಬ್ರಹ್ಮರಂಧ್ರವೇ ಪರಮಾತ್ಮನ ಸ್ಥಾನವಾಗಿದೆ. ಹೀಗೆ ಪ್ರತಿನಿತ್ಯ ಆಚರಿಸುವವನು ಯೋಗಿಯೂ, ಮಹಾತ್ಮನೂ ಆಗುತ್ತಾರೆ. ಪರಂಜ್ಯೋತಿಯು ಪ್ರಕಾಶಿಸಿ ನಕ್ಷತ್ರಾದಿ ಲೋಕಗಳನ್ನು ಎಲ್ಲ ಭೂತಗಳನ್ನು ತನ್ನಲ್ಲೇ ನೋಡುವವನಾಗುತ್ತಾನೆ.

578 ಸಹಸ್ರಶೀರ್ಷೇತಿ ಸೂಕ್ತಂ ಸರ್ವಕಾಮಫಲಪ್ರದಂ।
ವೇದಗರ್ಭ ಶರೀರೇಣ ಸವೈ ನಾರಾಯಣಃ ಸ್ಮೃತಃ ॥

579 ಬ್ರಹ್ಮೇಂದ್ರ ರುದ್ರ ಪರ್ಜನ್ಯಾ ಅತ್ರ ಸೂಕ್ತೇ ವ್ಯವಸ್ಥಿತಾಃ ॥

580 ಅತ್ರಸ್ಥಮೇತತ್ ದ್ರಷ್ಟವ್ಯಂ ಜಗತ್ ಸ್ಥಾವರಜಂಗಮಂ।
ಅತಃ ಸಂಪಠಮಾನೋಪಿರಿ ಭಕ್ತಿಂ ನ ಪರಿಹಾರಯೇತ್॥

581 ಭಕ್ತಾನುಕಂಪೀ ಭಗವಾನ್ ಶ್ರೂಯತೇ ಪುರುಷೋತ್ತಮಃ।
ಪೂಜಾರ್ಥಂ ತಸ್ಯ ದೇವಸ್ಯ ವನಾತ್ ಸ್ವಯಮುಪಾಹೃತಾತ್॥

582 ಆರಣ್ಯಕ ವಿಧಾನೇನ ನಿರ್ವಪೇತ್ ಪ್ರತ್ಯಹಂ ಚರುಂ ।
ನಾರಾಯಣಾಯ ಸ್ವಾಹೇತಿ ಮಂತ್ರಾಂತೇ ಜುಹುಯಾದ್ಧವಿಃ ॥

583 ಆ ಸಹಸ್ರಾತ್ತತಶ್ಚಕ್ಷುರ್ದಿವ್ಯಂ ಹೋತುರ್ದದಾತಿ ಸಃ ।
ಅಪಿ ವಾ ಚರುಸಾಹಸ್ರಂ ತಂತ್ರೇಣೈಕೇನ ನಿರ್ವಪೇತ್ ॥

584 ಯಾವಂತೋ ವಾಪಿ ಶಕ್ಯಂ ತೇ ಅಹ್ನಾಸರ್ವಾನ್ ಸಮಾಪಯೇತ್ ।
ಸಹಸ್ರಸ್ಯೇಪ್ಸಿತಾನಾಂ ಚ ಕಾಮಾನಾಂ ಲಭತೇ ಫಲಂ ॥
ಪುರುಷಾಯಃ ಸಮಾಯುಕ್ತಃ ಸಿದ್ಧೋ ವಾ ವಿಚರೇನ್ಮಹೀಂ ।

ಪುರುಷಸೂಕ್ತವು ಸರ್ವಕಾಮವನ್ನು ಕೊಡತಕ್ಕದ್ದಾಗಿದೆ. ಬ್ರಹ್ಮ, ಇಂದ್ರ, ರುದ್ರ, ಪರ್ಜನ್ಯಾದಿಗಳೆಲ್ಲರೂ ಇದರಲ್ಲಿಸನ್ನಿಹಿತರಾಗಿರುತ್ತಾರೆ. ಆರಣ್ಯಕ ವಿಧಾನದಲ್ಲಿ ಹೋಮ ಮಾಡಿ, ನಾರಾಯಣಾಯ ಸ್ವಾಹಾ ಎಂದು ಆಹುತಿ ನೀಡಬೇಕು. ಹೀಗೆ ಸಹಸ್ರಹೋಮ ಮಾಡಿದರೆ ದಿವ್ಯದೃಷ್ಟಿ ಸಿದ್ಧಿ. ಸರ್ವಕಾಮಸಮೃದ್ಧಿ. ಆಯುರ್ವೃದ್ಧಿ. ಸಿದ್ಧನಾಗಿ ಸರ್ವತ್ರ ವಿಚರಿಸಬಹುದು.

585 ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲ ವಾನ್ ಕಿರೀಟೀ
ಹಾರೀ ಹಿರಣ್ಮಯ ವಪುರ್ಧೃತ ಶಂಖಚಕ್ರಃ ॥

ಸವಿತೃಮಂಡಲ ಮಧ್ಯಗನಾದ, ಕಮಲಾಸನಸಾದ, ಕೇಯೂರ, ಮಕರ, ಕುಂಡಲ, ಕಿರೀಟಾದಿಗಳಿಂದ ಅಲಂಕೃತನಾದ ಹಿರಣ್ಮಯನಾದ, ಶಂಖಚಕ್ರಾಧರನಾದ ನಾರಾಯಣನನ್ನು ಸದಾ ಸ್ಮರಿಸಬೇಕು.

586 ಏತತ್ತು ಯಃ ಪಠತಿ ಕೇವಲ ಮೇವ ಸೂಕ್ತಂ
ನಾರಾಯಣಸ್ಯ ಚರಣಾವಭಿ ವಂದ್ಯ ವಂದ್ಯಾ ।
ಪಾಠೇನ ತೇನ ಪರಮೇಣ ಸನಾತನಸ್ಯ ಸ್ಥಾನಂ
ಜರಾಮರಣ ವರ್ಜಿತ ಮೇತಿ ವಿಷ್ಣೋಃ ॥




ಯಾರು ಈ ಸೂಕ್ತವನ್ನು ಪಠಿಸುತ್ತಾ ನಾರಾಯಣನನ್ನು ಸ್ಮರಿಸುತ್ತಾರೋ ಅವರು ಮುಪ್ಪುಸಾವುಗಳಿಲ್ಲದ ವಿಷ್ಣುವಿನ ಸ್ಥಾನ ಹೊಂದುತ್ತಾರೆ.

587 ಹವಿಷಾಗ್ನೌ ಜಲೇ ಪುಷ್ಪೈರ್ಧ್ಯಾನೇನ ಹೃದಯೇ ಹರಿಂ ।
ಯಜಂತಿ ಸೂರಯೋ ನಿತ್ಯಂ ಜಪಂತಿ ರವಿಮಂಡಲೇ ॥

ಹವಿಸ್ಸಿನಿಂದ ಅಗ್ನಿಯಲ್ಲಿ, ನೀರಿನಲ್ಲಿ ಹೂಗಳಿಂದ, ಹೃದಯದಲ್ಲಿ ಧ್ಯಾನದಿಂದ, ಪಂಡಿತರು ಸೂರ್ಯನಲ್ಲಿ ವಿಷ್ಣುವನ್ನು ಜಪಿಸುತ್ತಾರೆ.

588 ಬಿಲ್ವಪತ್ರಂ ಶಮೀಪತ್ರಂ ಪತ್ರಂ ಭೃಂಗಾರಕಸ್ಯ ಚ। ಮಾಲತೀ
ಕುಶಪದ್ಮಂ ಚ ಸದ್ಯಸ್ತುಷ್ಟಿಕರಂ ಹರೇಃ ॥

ಬಿಲ್ವಪತ್ರೆ, ಶಮೀಪತ್ರೆ, ಭೃಂಗಾರಕ, ಮಾಲತೀ, ದರ್ಭೆ, ತಾವರೆ-ಇವುಗಳು ಹರಿಗೆ ಪ್ರೀತಿಕರ.

589 ಯತ್ಕೃತತ್ ಪಶ್ಯತೇ ಕಿಂಚಿತ್ ತದ್ಧ್ಯಾಯನ್ ಮನಸೈವ ತು।
ಸಂಪಾದ್ಯ ತತ್ ಪ್ರಸಾದಾಚ್ಚ ದೇವದೇವಸ್ಯ ಚಕ್ರಿಣಃ ॥

590 ಪತ್ರೈಶ್ಚ ಪುಷ್ಪೈಶ್ಚ ಫಲೈಶ್ಚ ತೋಯೈ - ರಕ್ರೀತಲಬ್ಧೈಶ್ಚ ಸದೈವ ಸತ್ಸು।
ಭಕ್ತ್ಯೈಕಲಭ್ಯೇ ಪುರುಷೇ ಪುರಾಣೇ ಮುಕ್ತ್ಯೈ ಕಿಮರ್ಥಂ ಕ್ರಿಯತೇ ತು ಯತ್ನ ॥

591 ಇತ್ಯೇವಮುಕ್ತಃ ಪುರುಷಸ್ಯ ವಿಷ್ಣೋರರ್ಚಾ
ವಿಧಿರ್ವಿಷ್ಣುಕುಮಾರ ನಾಮ್ನಾ ।
ಮುಕ್ತ್ಯೇಕಮಾರ್ಗ ಪ್ರತಿಬೋಧನಾಯ
ದೃಷ್ಟ್ವಾ ವಿಧಾನಂ ತ್ವಿಹ ನಾರದೋಕ್ತಂ ॥

ಈ ಪುರುಷಸೂಕ್ತವನ್ನು ಶ್ರಧ್ದೆಯಿಂದ ಪಠಿಸಿದರೆ ವಿಷ್ಣುವಿನ ಅನುಗ್ರಹ ಪ್ರಾಪ್ತಿಯಾಗುತ್ತದೆ. ಪತ್ರ, ಪುಷ್ಪ ಫಲ, ನೀರನ್ನು ಭಕ್ತಿಯಿಂದ ಸಮರ್ಪಿಸಿದರೆ ಮುಕ್ತಿ ಸಾಧ್ಯ. ನಾರದ ಮಹರ್ಷಿಯಿಂದ ಮುಕ್ತಿಗಾಗಿ ಈ ಪುರುಷಸೂಕ್ತ ವಿಧಿಯನ್ನು ಹೇಳಲಾಗಿದೆ.

ಇತಿ ತೃತೀಯೋಽಧ್ಯಾಯಃ

# ಚತುರ್ಥೋಽಧ್ಯಾಯಃ

592 ಯಾಓಷಧೀ: ಸ್ವಸ್ತ್ಯಯನಂ ಜಪೇತ ನಿಯತವ್ರತಃ।
ಓಷಧೀಶ್ಚ ಯಜೇನ್ನಿತ್ಯಂ ಷಣ್ಮಾಸಾನೇವ ನಿತ್ಯಶಃ॥

593 ದೃಷ್ಟ್ವಾ ಶರದಿ ವೈ ರುದ್ರ - ಮೋಷಧೀಶ್ಚ ಯಜೇತ್ತಥಾ।
ನ ಭವಂತ್ಯಾಮಯಾಸ್ತಸ್ಯ ತಥಾ ಜೀರ್ಣಾದಿಕಾನಿ ಚ॥

594 ಕ್ರಿಯಾಂ ತು ಸಪ್ತರಾತ್ರೇಣ ಸಪ್ತಕೃತ್ವ: ಸಮಾಹಿತ:।
ಪ್ರಪದ್ಯೇತೌಷಧೀರ್ವಿಪ್ರ: ಸೂಕ್ತಮೇತಜ್ಜಪನ್ ಸದಾ॥

595 ದ್ವಿಷತ್ ಕ್ಷೇತ್ರಾದಿಹಾಲಬ್ಧ್ವಾ - ಮಿತಿ ವಿಜ್ಞಾಪಯೇತ ಚ।
ಸ್ವಕ್ಷೇತ್ರೇ ಚರುಣೇವೇಷ್ಟ್ವಾ ವಿಂದತೇ ದ್ವಿಷದೌಷಧೀ:॥

ಶುಭಕ್ಕಾಗಿ ಪ್ರತಿನಿತ್ಯ ''ಯಾ ಓಷಧೀಃ'' ಎಂಬ ಸೂಕ್ತವನ್ನು ಜಪಿಸಬೇಕು. 6 ತಿಂಗಳು ಪ್ರತಿನಿತ್ಯ ಓಷಧಿಗಳನ್ನು ಕುರಿತು ಈ ಮಂತ್ರಗಳಿಂದ ಹೋಮ ಮಾಡಿದರೆ ಯಾವ ರೋಗವೂ ಬರುವುದಿಲ್ಲ. ಶತ್ರುಕೃತ ಓಷಧೀ.ಪ್ರಯೋಗಗಳು 7 ರಾತ್ರಿ ಈ ಸೂಕ್ತ ಪಠಿಸಿ ಚರುಹೋಮ ಮಾಡಿದರೆ ನಾಶವಾಗುತ್ತವೆ.

596 ವೃಷ್ಟಿಕಾಮೋ ಜಿತಾಹಾರ: ಪ್ರಪದ್ಯೇತ ಬೃಹಸ್ಪತಿಂ।
ಪಾಯಸೇನೋಪಹಾರೇಣ ಹೋಮೇನ ಚ ಸಮನ್ವಿತಃ॥

597 ಬೃಹಸ್ಪತೇ ಪ್ರತೀತ್ಯೇತತ್ ವೃಷ್ಟಿಕಾಮಃ ಪ್ರಯೋಜಯೇತ್।
ಪರ್ಜನ್ಯಂ ಚ ನಮಸ್ಕೃತ್ವಾ ವೃಷ್ಟಿಂ ವಿಂದತಿ ಶೋಭನಾಂ॥

ಮಳೆಯನ್ನು ಅಪೇಕ್ಷಿಸುವವನು ಜಿತಾಹಾರನಾಗಿ ''ಬೃಹಸ್ಪತೇ ಪ್ರತಿ ಮೇ'' ಎಂಬ ಸೂಕ್ತ ಮಂತ್ರ ಜಪ, ಹೋಮವನ್ನು ಮಾಡಬೇಕು.

598 ಸರ್ವತ್ರ ತು ಪರಾಶಾಂತಿ - ರ್ಜ್ಞೇಯೋ (ಅ)? ಪ್ರತಿರಥಸ್ತ್ವೃಷಿ:।
ಯಮೇವದೇಶಂ ಗಚ್ಛೇತ ಶತ್ರುಂ ವಾಪ್ಯನುಮಂತ್ರಿತ:॥

shrinath.udupa@gmail.com



599 ನಾಜಿತ್ವಾ ವಿನಿವರ್ತೇತ ಪರಂ ಹಿ ಬ್ರಹ್ಮಣೋ ಬಲಂ।
ಸರ್ವಕಾಮೈರ್ಜಪೇದೇತತ್ ಸರ್ವಕಾಮಸಮೃದ್ಧಯೇ॥

ಶತ್ರುವನ್ನು ಗೆಲ್ಲಲು ಆಶುಃಶಿಶಾನೋ ಎಂಬ ಸೂಕ್ತವನ್ನು ಜಪಿಸಬೇಕು.

600 ಸಂಗ್ರಾಮಮಭ್ಯುದ್ಯಾತೋ ವಾ ರಾಜಾ ಚೈತತ್ ಪ್ರಯೋಜಯೇತ್।
ಸರ್ವಾನ್ ವಿಜಯತೇ ಶತ್ರೂನ್ ನ ಪರಾಜೀಯತೇ ಪರೈ:॥

601 ಪಥಿ ಸ್ವಸ್ತ್ಯಯನಂ ಚೈತತ್ ತಸ್ಕರೇಭ್ಯಶ್ಚರನ್ ಪಥಿ। ಭೂತೋರಗ
ಪಿಶಾಚೇಭ್ಯ: ಸರ್ವೇಭ್ಯ: ಪರಿರಕ್ಷತಿ॥

ರಾಜನಾದವನೂ ಈ ಸೂಕ್ತವನ್ನು ಜಪಿಸಿ ಯುದ್ಧಕ್ಕೆ ಹೊರಟರೆ ಜಯ ನಿಶ್ಚಿತ. ಭೂತ, ಪಿಶಾಚ, ಸರ್ಪಗಳ ಬಾಧೆಯೂ ಇರುವುದಿಲ್ಲ.

602 ಭೂತಾಂಶಸ್ಯ ಋಷೇಃ ಸೂಕ್ತಂ ಪ್ರಜಾಕಾಮಃ ಶುಚಿರ್ಜಪನ್।
ಅನುರೂಪಾಂ ಪ್ರಜಾಮಾಶು ಲಭತೇ ನಾತ್ರ ಸಂಶಯಃ॥

603 ಸ್ಥಾಲೀಪಾಕೇನ ನಾಸತ್ಯಾವಶ್ವಿನೌ ತು ಯಜೇತ್ ದ್ವಿಜ:। ಅನೇನೈವ
ತು ಸೂಕ್ತೇನ ಹುತ್ವಾಶ್ವಾನನುಮಂತ್ರಯೇತ್॥

604 ಪಾಯಸಂ ಕೃಸರಂ ಮಾಂಸ - ಮೋದನಂ ದಧಿಸಕ್ತುಕಾನ್।
ಕುಲ್ಮಾಷಾಂಶ್ಚ ಕರಂಭಾಂಶ್ಚ ಫಲಾನಿ ವಿವಿಧಾನಿ ಚ॥

605 ಚಿತ್ರಮಾಲ್ಯ ಶುಭಾನ್ ಗಂಧಾನನ್ನಪಾನಾನಿ ಯಾನಿ ಚ। ಭಕ್ಷ್ಯಂ
ಭೋಜ್ಯಂ ಚ ಪೇಯಂ ಚ ಸಮಾಹೃತ್ಯೋದಿತೇ ರವೌ॥

606 ಭೂತಾಂಶಮಭ್ಯ ಸೇತ್ತಾವದ್ಯಾವದಸ್ತಮಿ ತೋ ರವಿ:।
ಅರ್ಧರಾತ್ರೇ ತ್ವತಿಕ್ರಾಂತೇ ತತೋಽಶ್ವಿಭ್ಯಾಂ ನಿವೇದಯೇತ್।
ದೀರ್ಘಾಯುಷಂ ಸುರೂಪಂ ಚ ಲಭೇತ್ ಪುತ್ರಂ ಸುವರ್ಚಸಂ॥

607 ರೂಪವಾಂಶ್ಚ ಭವೇನ್ನಿತ್ಯಂ ಭೂತಾಂಶಂ ಯೋಽಭ್ಯಸೇತ್ ಸದಾ।
ಸಾರ್ವಕಾಮಿಕಮಪ್ಯೇನ ಮೃಷಿಂ ವಿದ್ಯಾದ್ವಿಚಕ್ಷಣ:॥

ಸಂತತಿಯನ್ನು ಅಪೇಕ್ಷಿಸುವವನು ಭೂತಾಂಶ ಋಷಿಯ ''ಉಭಾ ಉನೂನಂ'' ಎಂಬ ಸೂಕ್ತವನ್ನು ಜಪಿಸಬೇಕು. ಇದೇ ಸೂಕ್ತದಿಂದ ಅಶ್ವಿನೀದೇವತೆಗಳನ್ನುದ್ದೇಶಿಸಿ ಪಾಯಸ, ಎಳ್ಳನ್ನ, ಮಾಂಸ, ಮೊಸರು, ಹಿಟ್ಟು, ಹುರಿಹಿಟ್ಟು,, ಅಲಸಂದೆ ಕಾಳು, ಹಣ್ಣುಗಳು-ಭಕ್ಷ್ಯ ಭೋಜ್ಯಗಳನ್ನು ಸಂಧ್ಯಾಕಾಲದಲ್ಲಿ ಮಾಡಿ, ಅರ್ಧರಾತ್ರಿಯ ನಂತರ ನಿವೇದಿಸಬೇಕು. ಆಯುಷ್ಮಂತನಾದ, ವರ್ಚಸ್ವಿಯಾದ ಪುತ್ರನು ಜನಿಸುತ್ತಾನೆ.

608 ನ ವಾ ಉ ದೇವಾ ಇತ್ಯೇತಜ್ಜಪೇತ ನಿಯತವ್ರತ: ।
ಅನ್ನಂ ವಿಂದತಿ ಸರ್ವತ್ರ ಯತ್ರ ಯತ್ರೋಪತಿಷ್ಠತಿ॥

609 ಪಾಪ್ಮೋಪಹತಮಾತ್ಮಾನಂ ಯೋ ಮನ್ಯೇತ ವಿಚಕ್ಷಣ:।
ಸ ಜಪೇನ್ನಿಯತೋ ಭೂತ್ವಾ ಲಘು ಮನ್ಯೇತ ಪಾಪ್ಮನಾ॥

''ನ ವಾ ಉ ದೇವಾ:'' ಎಂಬ ಸೂಕ್ತವನ್ನು ಜಪಿಸುವವನಿಗೆ ಎಲ್ಲಿದ್ದರೂ ಯಾವಾಗಲೂ ಆಹಾರ ಲಭಿಸುತ್ತದೆ. ಅವನ ಪಾಪಗಳೂ ನಶಿಸುತ್ತವೆ.

610 ವಾಚಂ ಪ್ರಪದ್ಯೇದ್ವಾಗ್ಕಾಮೋ ಹುನೇದಾಶು. ಜಪನ್ನಿಮಾ:। ಅಹಂ
ರುದ್ರೇಭಿರಿತ್ಯೇತತ್ ವಾಗ್ಮೀ ಭವತಿ ಪೂಜಿತ:॥

''ಅಹಂ ರುದ್ರೇಭಿ:'' ಎಂಬ ಸೂಕ್ತವನ್ನು ಜಪಿಸಿ ಹೋಮ ಮಾಡಿದರೆ ವಾಗ್ಮಿಯಾಗುತ್ತಾನೆ.

611 ನತ ಮಿತ್ಯಷ್ಟಕಂ ಸೂಕ್ತಂ ವೈಶ್ವದೇವಂ ಜಪನ್ಮುನಿ:।
ಕೃತ್ಸ್ನಂತು ಕಲ್ಮಷಂ ಹತ್ವಾ ವಿಶ್ವೈರ್ದೇವೈ: ಸಹಾಸತೇ॥

''ನತಮಂಹೋ'' ಎಂಬ ವಿಶ್ವೇದೇವತಾಕ ಸೂಕ್ತವು ಪಾಪನಾಶಕವಾಗಿದೆ.

612 ರಾತ್ರೀಂ ಪ್ರಪದ್ಯೇ ಮನಸಾ ಶುಚಿ: ಪರ್ಣವ್ರತೋ ನಿಶಿ।
ಯ: ಕಾಮಯೇತ ನ ಪುನ - ರ್ಜಾಯೇಯಮಿತಿ ಯೋನಿಷು॥





613 ಸಹಸ್ರಕೃತ್ವೋ ಮನಸಾ ಜಪೇದ್ರಾತ್ರೀತಿ ರಾತ್ರಿಷು।
ಸ್ಥಾಲೀಪಾಕೇನ ರಾತ್ರಿಂ ಚ ಯಜೇತಾಹರಹರ್ನಿಶಿ।
ತನ್ಮನಾ ನಿಶಿ ಚಾಸೀನ - ಸ್ತಿಷ್ಠೇದಹನಿ ಧಾರ್ಮಿಕ:॥

614 ಊರ್ಧ್ವಂ ಸಂವತ್ಸರಾಚ್ಚೈವ ಚರುಂ ಪಯಸಿ ಸಂಸ್ಕೃತಂ।
ಸಹಸ್ರಕೃತ್ವಸ್ತ್ವೇತೇನ ದಿವಾ ಹೋಮೋ ವಿಧೀಯತೇ॥

615 ಜುಹುಯಾನ್ನಿಶಿ ಪೂರ್ವಸ್ಮಿನ್ ಭಾಗೇ ರಾತ್ರೌ ಸಮಾಹಿತ:।
ದಿವಾ ಚಾವಿಶ್ವತಿಂ ಕಾರ್ಯಂ ಛಾಯಾಯಾಮಂಶು ತೇಜಸಾ॥

616 ಪ್ರತಿಪ್ರಯತ ಆತ್ಮವಾನ್ ಸೂಕ್ತಂ ತು ಮನಸಾ ಜಪೇತ್।
ಸಂವತ್ಸರೇ ತೃತೀಯೇ ತು ಸರ್ಪಿಷಾ ಸಾಧಯೇಚ್ಚರುಂ॥

617 ಅಥಾಸ್ಯ ವರದಾ ದೇವೀ ರಾತ್ರಿರ್ಭವತಿ ಶರ್ವರೀ।
ವಿಜ್ಞಾಪಯೀತ ತಾಂ ದೇವೀಂ ವರದಾಂ ಸ್ವಯಮಾಗತಾಂ॥

618 ಸಂವತ್ಸರೇ ಋತೌ ಮಾಸಿ ದಿವಸೇ ಸ್ಮಿನ್ ಕ್ಷಣೇಪಿ ವಾ।
ಪ್ರಯಾಣಕಾಲೋ ಭವಿತಾ ತವ ವತ್ಸೇತಿ ವತ್ಸಲಾ॥

619 ರಾತ್ರಿ ಸೂಕ್ತಂ ಜಪನ್ನೇವ ತಂ ಕಾಲಂ ಪ್ರತಿಪದ್ಯತೇ।
ನ ಯೋನಿಂ ಪುನರಾಯಾತಿ ಸರ್ವ ಪಾಪೈ: ಪ್ರಮುಚ್ಯತೇ॥

ಪುನರ್ಜನ್ಮವನ್ನು ಅಪೇಕ್ಷಿಸದವನು ಕೇವಲ ಸೊಪ್ಪನ್ನು ಸೇವಿಸುತ್ತಾ ರಾತ್ರಿಯಲ್ಲಿ ''ರಾತ್ರೀ''ಸೂಕ್ತವನ್ನು ಸಾವಿರ ದಿನ ಜಪಿಸಬೇಕು. ಮತ್ತು ಹಗಲಿನಲ್ಲಿ ಸ್ಥಾಲೀಪಾಕ ಹೋಮ ಮಾಡಬೇಕು. ಒಂದು ವರ್ಷದ ನಂತರ ಹಾಲಿನಲ್ಲಿ ಬೇಯಿಸಿದ ಅನ್ನದಿಂದ ಹೋಮಿಸಬೇಕು. ಮೂರನೆಯ ವರ್ಷದಲ್ಲಿತುಪ್ಪದ ಅನ್ನದಿಂದ ಹೋಮ ಮಾಡಬೇಕು. ಹೀಗೆ ಅನುಷ್ಠಿಸಿದರೆ ರಾತ್ರೀದೇವಿ ಪ್ರತ್ಯಕ್ಷಳಾಗುತ್ತಾಳೆ. ಹಾಗೂ ಆ ಕ್ಷಣವೇ ಸಾಧಕನು ಕಾಲಪುರುಷನನ್ನು ಸೇರಿ ಪುನರ್ಜನ್ಮವಿಲ್ಲದವನಾಗುತ್ತಾನೆ. ಅಮೃತತ್ವ ಹೊಂದುತ್ತಾನೆ.

620 ಮಮಾಗ್ನೇ ವರ್ಚ ಇತ್ಯೇತತ್ ಸರ್ವಕಾಮೈರ್ಜಪೇತ್ ದ್ವಿಜ:।
ಜುಹ್ವನ್ನಾಜ್ಯಮನೇನೈವ ಸರ್ವಾನ್ ಕಾಮಾನವಾಪ್ನುಯಾತ್॥

621 ಯಾಂ ಕಲ್ಪಯಂತೀತಿ ಸದಾ ಜಪೇತ ನಿಯತವ್ರತ: ।
ನೈನಂ ಕೃತ್ಯಾನಿ ಹಿಂಸಂತಿ ಕ್ರುದ್ಧಾಭಿಚರಿತಾನಿ ಚ ॥

622 ಯಮಾಂಗಿರಸ ಕಲ್ಪೈಸ್ತು ತದ್ವಿದೋಽಭಿಚರೇತ ಸ:।
ಪ್ರತ್ಯಂಗಿರಸ ಕಲ್ಪೇನ ಸರ್ವಾಂಸ್ತಾನ್ ಪ್ರತಿಬಾಧತೇ॥

623 ಪ್ರತ್ಯಂಗಿರಸ ವಿದ್ವಾಂಸ್ತು ನ ರಿಷ್ಯೇತ ಕದಾ ಚನ ।
ನೈನಂ ಕೃತ್ಯಾನಿ ಹಿಂಸಂತಿ ಜ್ಞಾತಾಜ್ಞಾತಾನಿ ವಾ ಕ್ವಚಿತ್॥

624 ಅಜಾನತಾ ಜಾನತಾ ವಾ ಕ್ರುದ್ಧೇನಾಧರ್ಷಿತೇನ ವಾ ।
ಆಕ್ರುಷ್ಟಂ ವಾ ದುರುಕ್ತಂ ವಾ ನೈನೋ ವಿಂದತಿ ತದ್ವಿದಂ ॥

625 ಏವಮೇವ ಜಪೇನ್ನಿತ್ಯ - ಮೃಷಿಂ ಸ್ವಸ್ತ್ಯಯನಾಯ ವೈ ।
ಸರ್ವಪ್ರಾಯಶ್ಚಿತ್ತಮೇತ - ದಭಾಷತ ಋಷಿ: ಸ್ವಯಂ॥

626 ಸ್ಥಾವರಾಣಾಂ ನಿವೇಶೇಷು ನಗರಾಣಾಂ ತಥೈವ ಚ ।
ಗ್ರಾಮಾಣಾಂ ಚ ಗೃಹಾಣಾಂ ಚ ಜಪೇತ ತಮೃಷಿಂ ಸದಾ ॥

ಮಮಾಗ್ನೇ ವರ್ಚಃ'' ಎಂಬ ಸೂಕ್ತಜಪ, ಹೋಮವು ಸರ್ವಕಾಮದಾಯಕ. ಈ ಸೂಕ್ತ ಜಪದಿಂದ'' ಆಭಿಚಾರ ಕೃತ್ಯಗಳು ಬಾಧಿಸುವುದಿಲ್ಲ ಶಾಪಬಾಧೆ ಇರುವುದಿಲ್ಲ. ಸರ್ವಶತ್ರುದ್ವೇಷ ಶಮನವೂ, ಸರ್ವಪಾಪಶಮನವೂ ಆಗುತ್ತದೆ. ಪ್ರಯಾಣಕಾಲದಲ್ಲಿ ಶುಭಕ್ಕಾಗಿ ನಿತ್ಯ ಈ ಸೂಕ್ತಜಪ ಮಾಡಬೇಕು.

627 ಜಾತರೂಪಮಯಂ ವಿದ್ವಾನ್ ಕಾರಯೇತ್ ತ್ರಿವೃತಂ ಮಣಿಂ ।
ಸಹಸ್ರಸಂಪಾತಹುತ - ಮೃಷಿಣಾ ತೇನ ತಂ ತತಃ ॥

628 ಪ್ರತಿಮುಚ್ಯೇತ ಶಿರಸಿ ಗ್ರೀವಾಯಾಮಥ ವೋರಸಿ ।
ನೈನಂ ಕೃತ್ಯಾನಿ ಹಿಂಸಂತಿ ಜ್ಞಾತಾಜ್ಞಾತಾನಿ ಯಾನಿ ಚ ॥

shrinath.udupa@gmail.com



ಮೂರು ಸುತ್ತು ಇರುವ ಬಂಗಾರದ ಮಣಿಯನ್ನು ಮಾಡಿಸಿ ಸಾವಿರ ಸಲ ಸಂಪಾತಾಜ್ಯದಿಂದ ಅಭಿಶೇಕ ಮಾಡಿ ತಲೆಯಲ್ಲಿ ಅಥವಾ ಕೊರಳಿನಲ್ಲಿ ಅಥವ ಎದೆಯಲ್ಲಿ ಧರಿಸಿದರೆ ಎಲ್ಲ ಆಭಿಚಾರ ಕೃತ್ಯಗಳೂ ನಾಶವಾಗುತ್ತವೆ.

629 ಅನೇನೈವ ತು ಸೂಕ್ತೇನ ರಾಜ್ಞಾಂ ತು ಸಮಲೋಹಿತಂ ।
ಕಾರಯೇತ ಮಣಿಂ ವಿದ್ವಾಂಸ್ತಾವದೇವಾನುಮಂತ್ರಣಂ ॥

630 ಸಂಗ್ರಾಮೇಷು ಧ್ವಜಾಗ್ರಾಣಿ ವಾದಿತ್ರಾಣ್ಯನುಮಂತ್ರಯೇತ್।
ಆಸನಾನಿ ಚ ಶಯ್ಯಾಶ್ಚ ಯಾನಾನಿ ವಿವಿಧಾನಿ ಚ ॥

631 ತಸ್ಯಾಭಿಚರತೇ ಸಾಕ್ಷಾ-ದಂಗಿರರ್ಷಿರಪಿ ಸ್ವಯಂ ।
ಪ್ರತ್ಯಂಗಿರಸ ಕಲ್ಪೇನ ಸರ್ವಂ ತತ್ ಪ್ರತಿಬಾಧತೇ ॥

632 ಅಮಾನುಷೀರಭಿಚರೇತ್ ಕೃತ್ಯಾ: ಸೂಕ್ತಂ ಜಪನ್ನಿದಂ। ಮುಚ್ಯತೇ
ಸರ್ವತೋಽನಿಷ್ಟಾತ್ ಕಿಂ ಪುನರ್ಮಾನುಷಾತ್ ಭಯಂ ॥

633 ತಪಸ್ವೀ ನಿಯತೋ ದಾಂತ: ಪ್ರಯೋಕ್ತಾ ಚೇದ್ಬವೇದೃಷಿ: ।
ಸರ್ವಂ ತರತಿ ಶಾಂತಾತ್ಮಾ ತಪೋ ಹಿ ಸುಮಹದ್ಬಲಂ ॥

ರಾಜನಾದವನು ಯುದ್ಧಕ್ಕೆ ತೆರಳುವಾಗ ಈ ಮಂತ್ರಗಳಿಂದ ಅಭಿಮಂತ್ರಿಸಿದ ಮಣಿಯನ್ನು ಧರಿಸಿ, ಧ್ವಜ, ವಾದ್ಯ, ಆಸನ, ವಾಹನಾದಿಗಳನ್ನೂ ಅಭಿಮಂತ್ರಿಸಬೇಕು. ಸರ್ವಶತ್ರು ನಾಶವಾಗಿ ಜಯ ಸಿದ್ಧಿ. ಈ ಸೂಕ್ತ ಜಪದಿಂದ ಸರ್ವಭಯ ನಿವಾರಣೆ. ಶಾಂತನಾಗಿ, ಜಿತೇಂದ್ರಿಯನಾಗಿ, ಇದನ್ನು ಜಪಿಸುವನು ಋಷಿಯೇ ಆಗಿ ಸಂಸಾರಸಾಗರವನ್ನು ದಾಟುತ್ತಾನೆ.

634 ಆಯುಷ್ಯಮಾಯುರ್ವರ್ಚಸ್ಯಂ ಸೂಕ್ತಂ ದಾಕ್ಷಾಯಣಂ ಮಹತ್।
ಅಲಂಕಾರಂ ಹಿರಣ್ಯಂ ವಾ ಪ್ರಾಪ್ಯ ದಾಕ್ಷಾಯಣಂ ಜಪೇತ್।
ಪ್ರಾಪ್ತಾಂಸಃ ಶ್ರಿಯಮಾದತ್ತೇ ಬಹು ಚಾನ್ನಂ ಸಮಶ್ನುತೇ॥

'ಆಯುಷ್ಯಂ'' ಎಂಬ ಖಿಲ ಸೂಕ್ತಜಪವು ಆಯಸ್ಸು ಹಾಗೂ ವರ್ಚೋದಾಯಕವಾಗಿದೆ. ಐಶ್ವರ್ಯವನ್ನೂ ಅನ್ನವನ್ನೂ ಸದಾ ನೀಡುತ್ತದೆ.

635 ನಾಸದಾಸೀದಿತಿ ಜಪೇ - ಜ್ಜುಹುಯಾದ್ಯೋಗ ತತ್ಪರಃ ।
ಪ್ರಜಾಪತೇಸ್ತು ಸಾಯುಜ್ಯಂ ದ್ವಾದಶಾಬ್ದೈಃ ಸಮಶ್ನುತೇ ॥

12 ವರ್ಷ ಯೋಗಿಯಾಗಿ ''ನಾಸದಾಸೀತ್'' ಸೂಕ್ತವನ್ನು ಜಪಿಸುವವನು ಬ್ರಹ್ಮಸಾಯುಜ್ಯ ಹೊಂದುತ್ತಾನೆ.

636 ಉತ ದೇವಾ ಇತಿ ಜಪೇ- ದಾಮಯಾವೀ ಯುತವ್ರತಃ ।
ಘೃತಕುಂಭಂ ನಿಧಾಯಾಥ ಜುಹುಯಾಜ್ಜಾತವೇದಸಿ ॥

637 ಕುಂಭ ಸಂಪಾತಮನ್ಯಸ್ಮಿನ್ ಕಾಂಸ್ಯ ಪಾತ್ರೇ ನಿಧಾಪಯೇತ್ ।
ಯೋಽನ್ನಾರ್ಥ್ಯಲಂ ನ ಚಾನ್ನಂ ಸ್ಯಾತ್ ಸ ಇದಂ ಪ್ರಕಾಶಯೇತ್ ॥

638 ತೇನಾಜ್ಯೇನಾಂಗಮಭ್ಯಜ್ಯ ಶನಕೈರನ್ನಭಾಗ್ಭವೇತ್ ।
ರೋಗರ್ತಸ್ಯಾಪ್ಯನೇನೈವ ಗಾತ್ರಮಂಕ್ತ್ವಾ ಜಪೇದಿದಂ ॥

ಜಿತೇಂದ್ರಿಯನಾಗಿ ''ಉತದೇವಾಃ'' ಸೂಕ್ತವನ್ನು ಜಪಿಸುವವನಿಗೆ ರೋಗವಿಲ್ಲ. ಅಗ್ನಿಗೆ ಘೃತಾಹುತಿ ಕೊಟ್ಟು (ಇವೇ ಮಂತ್ರಗಳಿಂದ) ಸಂಪಾತಾಜ್ಯವನ್ನು ಕಂಚಿನಪಾತ್ರೆಯಲ್ಲಿಟ್ಟು ಅನ್ನವಿಲ್ಲದವನಿಗೆ ಕೊಟ್ಟರೆ ಅವನಿಗೆ ಸರ್ವದಾ ಅನ್ನಲಾಭ. ಸಂಪಾತಾಜ್ಯವನ್ನು ಲೇಪಿಸಿಕೊಂಡರೆ ಸರ್ವರೋಗ ಶಮನ, ಅಜೀರ್ಣಾದಿ ವ್ಯಾಧಿಗಳು ನಾಶವಾಗುತ್ತವೆ.

639 ಅಗ್ನೇ ಅಚ್ಛಾವದೇತ್ಯೇತತ್ ಧನಕಾಮಃ ಪ್ರಯೋಜಯೇತ್ ।
ನಿಯತಃ ಸರ್ಪಿಷಾ ಹುತ್ವಾ ಜಪೇದಯುತಶಃ ಪುನಃ ॥

640 ಖಾದಿರಾಣಾಂ ಹಿ ಸಮಿಧಾಂ ಜುಹುಯಾದ್ದಶತೀ ರ್ದಶ ।
ದಶಕೃತ್ವಃ ಸದಾರೇಣ ರಾಯಸ್ಪೋಷೇಣ ಪುಷ್ಯತಿ ।

shrinath.udupa@gmail.com



641 ಬಿಲ್ವೋದುಂಬರಪಾಲಾಶ್ಯೈ ಸ್ತಥಾ ರೌಹಿತಕೈಶ್ಚಯ ।
ಜುಹುಯಾದ್ಧನ ಕಾಮಸ್ತು ರಾಯಸ್ಪೋಷೇಣ ಪುಷ್ಯತಿ ॥

642 ಬೈಭೀತಕೇಧ್ಮೈರ್ಬಿಲ್ವೈಶ್ಚ ಜುಹುಯಾದರ್ಧಮಾಸಕಂ ।
ದ್ವಿಷತ್ ದ್ವೇಷಣಂ ತಸ್ಯಾಂತೇ ಸೂಕ್ತಮೇತತ್ ಪ್ರಯೋಜಯೇತ್ ॥

643 ದ್ವಿಷಂತಂ ಧನಿನಂ ಹತ್ವಾ ದ್ವಿಷತೇ ವಿಂದತೇ ಧನಂ ।
ಅಥ ವಾ ಜಪ್ಯಮೇವ ಸ್ಯಾತ್ ರಾಯಸ್ಪೋಷ ಧನಾರ್ಥಿನಾ ॥

''ಅಗ್ನೇ ಅಚ್ಛಾ'' ಎಂಬ ಸೂಕ್ತವು ಧನಕಾಮಿಗೆ ಹೇಳಲ್ಪಟ್ಟಿದೆ. ಪ್ರತಿನಿತ್ಯ 10 ಸಾವಿರ ಸಲ ತುಪ್ಪದಿಂದ ಹೋಮ ಮಾಡಬೇಕು. ಕಗ್ಗಲಿ ಸಮಿತ್ತನ್ನು ಹೋಮಿಸಬೇಕು. ಬಿಲ್ವ, ಔದುಂಬರ, ಪಾಲಾಶ ಸಮಿತ್ತುಗಳಾದರೂ ಆಗಬಹುದು. ಬೈಭೀತಕ, ಬಿಲ್ವಸಮಿತ್ತುಗಳಿಂದ ಒಂದು ಪಕ್ಷ (15 ದಿನ) ಹೋಮ ಮಾಡಿದರೆ ಶತ್ರುನಾಶ. ಶತ್ರುಧನವಶ.

644 ಅಯಮಗ್ನೇ ಜರಿತೇತಿ ಜಪೇದಗ್ನಿಭಯೇ ಸತಿ ।
ವಿಧಿನಾ ತರ್ಪಯಿತ್ವಾಗ್ನಿಂ ಪಯೋ ದಧಿ ಘೃತಾದಿಭಿಃ ॥

645 ಸ್ವಯಂ ಪಾತುಂ ಯಾವದಿಚ್ಛೇತ್ತಾವದುದ್ಧೃತ್ವಾ ಚತುರ್ದಿಶಂ ।
ಅಪಾಮಿದಂ ಪರಿಣಯೇತ್ ಸಂತತೋದಕಧಾರಯಾ ॥

ಅಗ್ನಿಭಯ ನಿವಾರಣೆಗೆ ''ಅಯಮಗ್ನೇ ಜರಿತಾ'' ಎಂಬ ಸೂಕ್ತಜಪ ಮಾಡಬೇಕು. ಹಾಲು, ಮೊಸರು, ತುಪ್ಪಗಳಿಂದ ಅಗ್ನಿಯನ್ನು ಆರಾಧಿಸಬೇಕು. ಅಪಾಮಿದಂ ಮಂತ್ರದಿಂದ ನಾಲ್ಕು ದಿಕ್ಕಿನಲ್ಲೂ ಜಲಸೇತನ ಮಾಡಬೇಕು.

646 ಉತಹ್ರದ ಇವ ಭೂತ್ವಾ- ಪ್ಯಗ್ನೇರ್ಭೇಷಜಮಂತಿಕಾತ್ ।
ಅರಣ್ಯಮೇತ್ಯ ಪಾಠಾಂತು ಕ್ರೀಣೇಯಾದ್ಯವಮುಷ್ಟಿನಾ ॥

647 ಯದಿ ಸೌಮ್ಯಸಿಸೋಮಾಯ ತ್ವಾಂ ಪರಿಕ್ರೀಣಾಮ್ಯೋಷಧಿಂ।
ಯದಿ ವಾರುಣ್ಯಸಿ ವರುಣಾಯ ತ್ವಾಂ ಪರಿಕ್ರೀಣಾಮ್ಯಹಂ ತತ:॥

648 ವಸುಭ್ಯಶ್ಚಾಥ ರುದ್ರೇಭ್ಯ ಆದಿತ್ಯೇಭ್ಯೋಥ ವಾ ಪುನ: ।
ವೈಶ್ವದೇವಸಿ ವಿಶ್ವೇಭ್ಯಃ ಪರಿಕ್ರೀಣಾಮ್ಯಹಂ ತತ:॥

649 ಕ್ಷಿಪ್ತ್ವಾಽಸುಮ ನಸ: ಪೂರ್ವ - ಮೋಷಧ್ಯಾ ಸಹ ವೀರುಧ್ಯೈ: ।
ತಸ್ಯ ವೀರ್ಯಂ ಸಮಾದತ್ತೇ ಕರ್ಮ ಯತ್ರ ಕರಿಷ್ಯತಿ ॥

650 ತಾಂ ತು ಮಧ್ಯೇ ಸಂದಧೀತೌಷಧೀನಾಂ ಚ ವಿಹಾಯಸಿ।
ಗ್ರಹಣೇ ತ್ವೌಷಧೀನಾಂ ಚ ಸರ್ವತ್ರೈಷ ವಿಧಿರ್ಭವೇತ್॥

651 ಉತ್ ಸ್ವಾಪಯೀತಾಥ ಪಾಠಾಂ-ತ್ವಿಮಾಮಿತಿ ಜಪನ್ನಿಹ।
ಪ್ರಾತಶ್ಚ ಪೇಷಯೇದೇನಾಂ ಸಂಸದಿ ಬ್ರಹ್ಮಚಾರಿಣಾಂ॥

652 ತದಲಾಭೇ ವ್ರತವತಾ ಕನ್ಯಯಾ ಬ್ರಾಹ್ಮಣೇನ ವಾ।
ಪ್ರಾತ: ಶುಚಿಸ್ತಾಂ ಘೃತೇನ ತ್ರಿ: ಪಿಬೇದನುಮಂತ್ರಿತಾಂ॥

ಇಮಾಂ ಖನಾಮಿ ಮುಂತಾದ ಮಂತ್ರಗಳನ್ನು ಹೇಳುತ್ತಾ ಓಷಧೀ ಗ್ರಹಣ ಮಾಡಬೇಕು. ಬ್ರಹ್ಮಚಾರಿ ಅಥವಾ ಕನ್ಯೆಯ ಕೈಯಲ್ಲಿ ಓಷಧಿಗಳ ರಸವನ್ನು ಅರೆಸಿ ತೆಗೆಯಬೇಕು. ಓಷಧಿ ಸ್ವೀಕಾರ ಮಾಡುವಾಗ ಬೆಳಗಿನ ಕಾಲದಲ್ಲಿ 3 ಸಲ ಓಷಧಿಗಳನ್ನು ಅಭಿಮಂತ್ರಿಸಿ ಘೃತದೊಂದಿಗೆ ಕುಡಿಯಬೇಕು.

653 ಇಮಾಮಿತಿ ತು ಸೂಕ್ತೇನ ಶತಕೃತ್ವೋ ದಶಾವರಂ।
ಸಪತ್ನೀಂ ಬಾಧತೇ ತೇನ ಪತಿಶ್ಚಾತೀವ ಮನ್ಯತೇ॥

654 ಪತಿಸ್ತು ಪರಿಜಪ್ಯೈನಾಂ ಪಾಠಾಮೇತೇನ ವೈ ಪಿಬೇತ್।
ಪಯಸಾಸಪ್ತರಾತ್ರೇಣ ಸಪತ್ನಾನ್ ಪ್ರತಿಬಾಧತೇ॥

655 ಮೂಲಮಂತ್ರ ಜಪ್ಯೈರನ್ಯೈ - ರ್ಯಾ ಪತಿಂ ಜೇತುಮಿಚ್ಛತಿ।
ಅಲೋಕಾಯಮಲೋಕಸ್ಥಾ ಮಜ್ಜತೇ ನರಕೇ ಹಿ ಸಾ॥





656 ಅನ್ಯಥಾ ಚೋಪನೀತಾನಿ ಚೂರ್ಣ ಮೂಲೌಷಧಾನ್ಯಪಿ।
ವಿನಾಶಯೇಯುಃ ಪುರುಷಂ ತಸ್ಮಾನ್ನಾನ್ಯತ್ ಸಮಾಚರೇತ್॥

657 ಪ್ರಿಯಂ ವದಾ ಭರ್ತರಿ ಯಾ ಭರ್ತಾ ಯಸ್ಯಾಃ ಪರಾಯಣಂ।
ವಾಕ್ ಚೈವ ಮಧುರಾ ಯಸ್ಯಾಃ ಪತ್ಯುಃ ಸಂವನನಂ ಮಹತ್॥
ಪ್ರಿಯಂ ಭರ್ತಾರಮಾಸಾದ್ಯ ಪಿಬೇದೇವೌಷಧೀಮಿಮಾಂ॥

658 ಪ್ರಿಯಂ ವದಾಂ ಸುಶೀಲಾಂ ಚ ಧರ್ಮ ಪತ್ನೀಮನಿಂದಿತಾಂ।
ಅವಮನ್ಯೇತ ಯೋ ಮೋಹಾತ್-ತಮಾಹುಃ ಪುರುಷಾಧಮಂ॥

"ಇಮಾ ಖನಾಮ್ಯೋಷಧೀ" ಎಂಬ ಸೂಕ್ತಜಪವನ್ನು ಮಾಡುವವಳಿಗೆ ಸವತಿಯರ ಕಾಟವಿರುವುದಿಲ್ಲ, ಗಂಡನೂ ಪ್ರಿಯಕರನಾಗಿರುತ್ತಾನೆ. ಕೇವಲ ಹಾಲು ಕುಡಿಯುತ್ತಾ ಈ ಮಂತ್ರಗಳನ್ನು ಜಪಿಸಿದರೆ 7 ದಿನಗಳಲ್ಲಿ ಶತ್ರುನಾಶ. ಸತ್ಪುರುಷರನ್ನು ವಶಮಾಡಿಕೊಳ್ಳಲು, ನಾಶಮಾಡಲು ಇದನ್ನು ಪ್ರಯೋಗಿಸಿದರೆ ನರಕಕ್ಕೆ ಹೋಗುತ್ತಾರೆ. ಆದ್ದರಿಂದ ಅಂಥವರಲ್ಲಿ ಪ್ರಯೋಗಿಸಬಾರದು. ದಂಪತಿಗಳಲ್ಲಿ ಸಾಮರಸ್ಯವಿಲ್ಲದಿದ್ದಾಗಲೂ ಈ ಮಂತ್ರಜಪ ಸಾಂಮನಸ್ಯ ಉಂಟುಮಾಡುತ್ತದೆ. ಸುಶೀಲೆಯಾದ, ಧರ್ಮಪತ್ನಿಯಾದವಳ ಮೇಲೂ ಈ ಮಂತ್ರ ಪ್ರಯೋಗಿಸಬಾರದು. ವಿಪರೀತ ಪರಿಣಾಮ ಉಂಟುಮಾಡುತ್ತದೆ.

659 ಅರಣ್ಯಾನೀತ್ಯರಣ್ಯೇಷು ಜಪೇತ್ ಸೂಕ್ತ ಮನೇಕಶಃ।
ಅರಣ್ಯಾನೀಂ ನಮಸ್ಕೃತ್ವಾ ಆರಣ್ಯಾತ್ ಪ್ರತಿಬಾಧತೇ॥

ಗಹನಾರಣ್ಯದಲ್ಲಿರುವಾಗ "ಅರಣ್ಯಾನ್ಯರಣ್ಯಾನಿ" ಎಂಬ ಸೂಕ್ತವನ್ನು ಪಠಿಸಿದರೆ ದುಷ್ಟಮೃಗಗಳ ಭೀತಿ ಇರುವುದಿಲ್ಲ.

660 ಶ್ರದ್ಧಾ ಸೂಕ್ತಂ ಜಪೇನ್ನಿತ್ಯಂ ಶ್ರದ್ಧಾಕಾಮಃ ಸಮಾಹಿತಃ।
ಸರ್ವತ್ರ ಲಭತೇ ಶ್ರದ್ಧಾಂ ಮೇಧಾಸೂಕ್ತಂ ತಥೈವ ಚ॥

661 ಬ್ರಾಹ್ಮೀಮಾಸಾದ್ಯ ಸೂಕ್ತೇ ದ್ವೇ ಜಪೇತ ನಿಯತವ್ರತಃ।
ತಂ ಪಿಬೇತ ಯಥಾಶಕ್ತ್ಯಾ ತ್ರ್ಯಹಾತ್ ಸಿದ್ಧಿಂ ನಿಯಚ್ಛತಿ ॥

662 ಶಂಖಪುಷ್ಪೀಂ ತು ಪಯಸಾ ಬ್ರಾಹ್ಮೀ ಪುಷ್ಪಾಣಿ ಸರ್ಪಿಷಾ।
ಶತಾವರೀಂ ಚ ಪಯಸಾ ವಚಾಮದ್ಭಿರ್ಘೃತೇನ ವಾ ॥

663 ಸೂಕ್ತಾಭ್ಯಾಮನುಮಂತ್ರಾಭ್ಯಾ-ಮೇಕೈಕಾಂ ತ್ರ್ಯಹಂ ಪಿಬೇತ್।
ಶ್ರದ್ಧಾಂ ಮೇಧಾಂ ಸ್ಮೃತಿಂ ಪುಷ್ಟಿಂ ಬಲಂ ಲಕ್ಷ್ಮೀಂ ಚ ವಿಂದತಿ ॥

664 ಸಿದ್ಧಿಂ ಪ್ರಾಪ್ನೋತಿ ಪರಮಾಂ ದೀರ್ಘಮಾಯುಃ ಸಮಶ್ನುತೇ।
ಅಥವಾ ಮನಸಾ ಧ್ಯಾಯೇತ್ ಸೂಕ್ತಂ ಸಿದ್ಧಿಂ ನಿಯಚ್ಛತಿ ॥

ಶ್ರದ್ಧಾಕಾಮನಿಗೆ ''ಶ್ರದ್ಧಾಸೂಕ್ತ ಮತ್ತು ''ಮೇಧಾಸೂಕ್ತ'' ಜಪ ವಿಹಿತವಾಗಿದೆ. ಇದರ ಜಪ ಮಾಡುತ್ತಾ ಬ್ರಾಹ್ಮೀ ಗಿಡದ ರಸ ಸೇವಿಸಿದರೆ ಮೂರು ದಿನದಲ್ಲಿ ಮೇಧಾ ಸಿದ್ಧಿಯಾಗುತ್ತದೆ. ಶಂಖಪುಷ್ಪಗಳನ್ನು ಹಾಲಿನಲ್ಲಿ, ಬ್ರಾಹ್ಮೀಪುಷ್ಪಗಳನ್ನು ತುಪ್ಪದೊಂದಿಗೂ, ಶತಾವರಿಯನ್ನು ಹಾಲಿನಲ್ಲೂ, ವಚಾ(ಬಜೆ)ವನ್ನು ನೀರು ಅಥವಾ ಘೃತದೊಂದಿಗೆ, ಈ ಎರಡು ಸೂಕ್ತಗಳಿಂದ ಅಭಿಮಂತ್ರಿಸಿ ಒಂದೊಂದನ್ನು 3 ದಿನ ಸೇವಿಸಿದರೆ ಶ್ರದ್ಧೆ, ಮೇಧೆ, ಧಾರಣಾಶಕ್ತಿ ಆಯಸ್ಸು ಬಲ, ಐಶ್ವರ್ಯ ಪ್ರಾಪ್ತಿಯಾಗುತ್ತದೆ.

665 ಶಾಸ ಇತ್ಥಾ ಸಪತ್ನಘ್ನಂ ಸಂಗ್ರಾಮೇ ವಿಜಿಗೀಷತಃ।
ಪ್ರಯೋಕ್ತವ್ಯಂ ತು ಶುಚಿನಾ ಜುಹುಯಾತ್ತತ್ರ ಸಿದ್ಧಯಃ ॥

666 ಅಥವಾ ಜಪ್ಯಮೇವ ಸ್ಯಾತ್ ಸಂಗ್ರಾಮಮಭಿಗಚ್ಛತಃ।
ಶಾಸ ಇತ್ಥೇತಿ ಯೋ ಹಂತುಂ ಶತ್ರೂಂಸ್ತಾಂಸ್ತು ವಿಬಾಧತೇ ॥

ಸಂಗ್ರಾಮಕ್ಕೆ ತೆರಳುವ ರಾಜನು ''ಶಾಸ ಇತ್ಥಾ'' ಎಂಬ ಸೂಕ್ತವನ್ನು ಜಪಿಸಿ ಹೋಮ ಮಾಡಿದರೆ ಶತ್ರುನಾಶವಾಗಿ, ಜಯ ಪ್ರಾಪ್ತಿ.





667 ಅಲಕ್ಷ್ಮೀ ನಾಶನಾರ್ಥಂ ತು ಜಪೇನ್ನಿತ್ಯಂ ಶಿರಿಂಬಿಠಂ।
ಅಪಾಮಾರ್ಗಮಯೀಂ ಶಾಖಾಂ ಸದರ್ಭಾಂ ಸಹ ವೀರುಧೈಃ ॥

668 ಗೃಹೀತ್ವಾತ್ಮಾನಂ ಪಾವಯೇ - ದಧಶ್ಚೋರ್ಧ್ವಂ ಚ ನಿತ್ಯಶಃ।
ಆಜ್ಯಂ ವಾನೇನ ಜುಹುಯಾತ್ ಸಹಸ್ರಂ ದಶತೀರ್ದಶ ॥
ತ್ರ್ಯಹೇಣ ನುದತೇ ದೇಹಾದಲಕ್ಷ್ಮೀಂ ಶತವಾರ್ಷಿಕೀಂ ॥

669 ಚಾಂದ್ರಾಯಣಂ ಚರನ್ನೇತತ್ ಸೂಕ್ತಂ ಸಿದ್ಧಿಕರಂ ಜಪೇತ್।
ಅಲಕ್ಷ್ಮೀರ್ನುದತೇ ದೇಹಾ-ದಪಿ ವರ್ಷ ಸಹಸ್ರಿಕೀ ॥

''ಅರಾಯಿ ಕಾಣೇ'' ಎಂಬ ಸೂಕ್ತವು ಅಲಕ್ಷೀ ಪರಿಹಾರಕ್ಕೆ ಹೇಳಲ್ಪಟ್ಟಿದೆ. ಉತ್ತರಣೆ ಸಮಿತ್ತುಗಳು, ದರ್ಭೆ, ಬಳ್ಳಿಗಳೊಂದಿಗೆ ಅಥವಾ ಆಜ್ಯದೊಂದಿಗೆ ಸಾವಿರ ಸಲ ಹೋಮ ಮಾಡಬೇಕು. 3 ದಿನದಲ್ಲೇ ಅಲಕ್ಷೀ ಪರಿಹಾರ. ಚಾಂದ್ರಾಯಣದೊಂದಿಗೆ ಈ ಅನುಷ್ಠಾನ ಮಾಡಿದರೆ ಶೀಘ್ರ ಪರಿಹಾರ.

670 ಗೃಹೀತಂ ಯಕ್ಷ್ಮಣಾ ದರ್ಭಾನ್ ಗೃಹೀತ್ವಾ ಸಂಸ್ಪೃಶನ್ ಜಪೇತ್।
ಮುಂಚಾಮಿತ್ವಾ ಹವಿಷೇತಿ ಯಕ್ಷ್ಮಾಣಮಪಕರ್ಷತಿ ॥

671 ಸಮಿದ್ಧಮಗ್ನಿಂ ಜುಹುಯಾ-ದಾಜ್ಯೇನೈವ ಯಥಾವಿಧಿ।
ಸಂಪಾತಮಾಜ್ಯೇ ನಿನಯೇತ್ ಸಂಪಾತೈಶ್ಚ ಪಯಃ ಪಿಬೇತ್ ॥

672 ಸಂಪಾತಭಾಜನೇ ಸರ್ಪಿ - ಶ್ಚೂರ್ಣಂ ತತ್ರ ನಿಧಾಪಯೇತ್।
ತತ್ರಾಸ್ಯ ಭೋಜನೀಯಂ ಸ್ಯಾತ್ ಪಾನೀಯಂ ಚಾನುಮಂತ್ರಿತಂ ॥

673 ಖಾದಿರಾಣಿ ಚ ಕಾಷ್ಠಾನಿ ಚೂರ್ಣಂ ಕೃತ್ವಾ ಸಹಾಂಬುಭಿಃ।
ಸಾಧಯೀತ ರಸಂ ಚೈಷಾಂ ಮಧ್ವಾಜ್ಯಾಭ್ಯಾಂ ಪಿಬೇತ್ ಸಹ ॥

674 ಮುಂಚಾಮಿತ್ವಾ ಹವಿಷೇತಿ ತತ್ರ ತತ್ರ ಪ್ರಯೋಜಯೇತ್।
ಯಕ್ಷ್ಮಾಣಮಪಕರ್ಷತಿ ಶರೀರಾರೋಗ್ಯ ಕರ್ಮಣಾ ॥

ಕ್ಷಯರೋಗಿಯು ದರ್ಭೆಯನ್ನು ಹಿಡಿದುಕೊಂಡು ''ಮುಂಚಾಮಿತ್ವಾ'' ಸೂಕ್ತ ಜಪಿಸಬೇಕು. ಇದೇ ಸೂಕ್ತದಿಂದ ಆಜ್ಯಾಹುತಿಗಳನ್ನು ಕೊಟ್ಟು ಸಂಪತಾಜ್ಯವನ್ನು (ಅವಶಿಷ್ಟ ಆಜ್ಯ) ಹಾಲಿನೊಂದಿಗೆ ಕುಡಿಯಬೇಕು. ಕಗ್ಗಲೀಮರದ ಕಡ್ಡಿಗಳ ಪುಡಿಯನ್ನು ನೀರಿನೊಂದಿಗೆ ಬೆರೆಸಿ ಆ ರಸವನ್ನು ತುಪ್ಪ ಮತ್ತು ಜೇನುತುಪ್ಪದೊಂದಿಗೆ ಸೇರಿಸಿ ಕುಡಿಯಬೇಕು.

675 ಯಸ್ಯಾ ಗರ್ಭಃ ಪ್ರಮೀಯೇತ ತತ್ರಾಗ್ನೌ ಜುಹುಯಾದ್ಧವಿಃ।
ಬ್ರಹ್ಮಣಾಗ್ನಿಃ ಸಂವಿದಾನ ಇತ್ಯಾಜ್ಯೇನ ಯಥಾವಿಧಿ॥

676 ಆಜ್ಯಶೇಷೇಣ ಚಾಭ್ಯಜ್ಯ ಗರ್ಭಿಣೀ ಪ್ರಸವೇತ್ತತ:।
ಪಿಬೇದೇವಾಜ್ಯಶೇಷಂ ತು ಜೀವನ್ ತಸ್ಯಾ: ಪ್ರಜಾಯತೇ॥

677 ಜಾತಾನಿ ಚೇತ್ ಪ್ರಮೀಯೇರನ್ ಆಜ್ಯಂ ಕೃತ್ವಾನು ಮಂತ್ರಿತಂ।
ಜುಹುಯಾದ್ ಬ್ರಹ್ಮಾಗ್ನಿರಿತಿ ಸಂಪಾತಾನ್ ನಿನಯೇನ್ಮಣೌ॥

678 ಮಣಿಂ ತು ತ್ರಿವೃತೇ ಸೂತ್ರೇ ವಾಸಯೇದ್ವಾಸಸಾ ಸಹ।
ನ್ಯಗ್ರೋಧಶುಂಗಯಾ ತತ್ರ ಶುಕ್ಲಲೋಹಿತವೇಷ್ಟಿತಂ॥

679 ತಂ ಸಾವಿತ್ರ್ಯಯುತೇನೈವಾ-ನುಮಂತ್ರ್ಯಾಥ. ಯಥಾವಿಧಿ।
ಸಂಪಾತೈರಯುತೇನೈವ ಬ್ರಹಣೇತಿ ಚ ಸಂಸ್ತುತಂ॥

680 ಉಪರಿಷ್ಟಾಚ್ಚ ಸಾವಿತ್ರ್ಯಾ ತಾವದೇವಾನುಮಂತ್ರಣಂ।
ಸರ್ವೈ: ಸ್ವಸ್ತ್ಯಯನೈಶ್ಚೈವ ಜಪೇದಭಿಹುತಂ ಮಣಿಂ॥

681 ಶಿರಸಾ ಧಾರಯೇನ್ನಾರೀ ಪ್ರಯತಾ ಗರ್ಭಿಣೀ ಸತೀ।
ತೃತೀಯೇ ಗರ್ಭಮಾಸೇ ತು ಮಣಿಮೇತಂ ಸಮಾಸಜೇತ್॥
ಪುಷ್ಪವತೀ ಪರಂ ನಾರೀ ಗೌ: ಸವತ್ಸಾಚರೇದ್ಯಥಾ॥

682 ಬಹುಪಾನೀಯ ಯವಸಾನ್ ವತ್ಸೇನ ಪಿಬತಾ ಸಹ।
ಚಾತಸ್ಯ ತು ಕುಮಾರಸ್ಯ ಕಂಠೇ ತಂ ಮಣಿಮಾಸಜೇತ್॥





683 ಆಜ್ಯಶೇಷಂ ಪುರಸ್ಕೃತ್ಯ ತಮಭ್ಯಜ್ಯ ಕುಮಾರಕಂ।
ಹುತ್ವಾ ಸ್ವಸ್ತ್ಯಯನೈರೇವ ಸ್ತ್ರೀ ಪುಮಾಂಸಂ ಪ್ರಸೂಯತೇ॥

684 ಊರ್ಧ್ವಂ ವರ್ಷಾತ್ ಸ್ವಸ್ತ್ಯಯನಂ ಪುನರೇವ ವಿಧೀಯತೇ।
ಪುನಃ ಸ್ತನಪ್ರದಾನಾರ್ಥಂ ಶ್ರದ್ಧಾಸೂಕ್ತೇನ ಪಾಯಯೇತ್॥

685 ಮೇಧಾಸೂಕ್ತೇನ ಚೈವೈತತ್ ಪಿಷ್ಟಂ ವ್ರೀಹಿಮಯಂ ಕೃತಂ।
ಮಧುಮಿಶ್ರಂ ಜಾತರೂಪಂ ಮೇಧಾವೀ ತೇನ ಜಾಯತೇ॥

686 ಶತಂ ವರ್ಷಾಣಿ ಜೀವೇತ ಮ್ರಿಯತೇ ನ ಪುರಾಯುಷ:।
ಸ್ಮೃತಮೇವ ಚ ತಸ್ಯ ಸ್ಯಾತ್ ಷಣ್ಮಾಸಾಚ್ಚ ತತ: ಪರಂ॥

''ಬ್ರಹ್ಮಣಾಗ್ನಿಃ'' ಎಂಬ ಸೂಕ್ತದಿಂದ ಆಜ್ಯಹೋಮ ಮಾಡಿ ಆಜ್ಯಶೇಷವನ್ನು ಗರ್ಭಿಣಿಗೆ ಲೇಪಿಸಿ ಮತ್ತು ಸೇವಿಸಿದರೆ ಗರ್ಭಸ್ರಾವಾಗದೇ ಪ್ರಸವವಾಗುತ್ತದೆ. ಜನಿಸಿದ ಮಗುವಿಗೆ ಆಯುಃಕ್ಷೀಣವಾಗಿದ್ದರೂ ಇದೇ ಸೂಕ್ತದಿಂದ ಆಜ್ಯಹೋಮ ಮಾಡಿ, ಸಂಪಾತಾಜ್ಯವನ್ನು ಮಣಿಯನ್ನು, ಆಲದಮರದ ಬಳ್ಳಿಯೊಂದಿಗೆ ಗಾಯತ್ರೀ ಮಂತ್ರದಿಂದ ಅನುಮಂತ್ರಿಸಿ ಹೋಮಿಸಿ ಮಣಿಯನ್ನು ಮಗುವಿನ ಕೊರಳಿಗೆ ಕಟ್ಟಬೇಕು. ಆಜ್ಯಶೇಷದಿಂದ ಮಗುವಿಗೆ ಸ್ನಾನ ಮಾಡಿಸಬೇಕು. ಒಂದು ವರ್ಷದ ನಂತರ ಮತ್ತೆ ಇದೇ ವಿಧಿಯನ್ನು ಆಚರಿಸಬೇಕು. ಶ್ರದ್ಧಾಸೂಕ್ತ ಜಪದೊಂದಿಗೆ ಮಗುವಿಗೆ ಹಾಲನ್ನು ಕುಡಿಸಬೇಕು. ಭತ್ತವನ್ನು ಪುಡಿಮಾಡಿ ಜೇನಿನೊಂದಿಗೆ ಹಾಗೂ ಬಂಗಾರದೊಂದಿಗೆ ಮೇಧಾಸೂಕ್ತವನ್ನು ಹೇಳುತ್ತಾ ಮಗುವಿಗೆ ತಿನ್ನಿಸಿದರೆ ಮೇಧಾಶಕ್ತಿ ವೃದ್ಧಿ ಆಯುವೃದ್ಧಿ.

687 ಆಜ್ಯಂ ಸಂಸ್ಕೃತ್ಯ ಜುಹುಯಾ-ದಕ್ಷೀಭ್ಯಾಂ ತ ಇತಿ ದ್ವ್ಯಚ:।
ಪಾಣಿನಾ ತು ಘೃತಾಕ್ತೇನ ಮೂರ್ಧಾನಂ ಸಂಸ್ಪೃಶೇತ್ ತತಃ।
ಏವಮೇವ ಜಪೇನ್ನಿತ್ಯಂ ಯಕ್ಷ್ಮಣೋ ವಿ ಪ್ರಮುಚ್ಯತೇ॥

688 ಕರ್ಣೌ ನೇತ್ರೇ ಚ ಚುಬುಕಂ ನಾಸಿಕಾಂ ಚೈವ ಸಂಸ್ಪೃಶೇತ್ ।
ಏವಮೇವ ಜಪೇನ್ನಿತ್ಯಂ ಯಕ್ಷ್ಮಣೋ ವಿ ಪ್ರಮುಚ್ಯತೇ ॥

689 ಪೂರ್ವೋಕ್ತೇನೈವ ಕಲ್ಪೇನ ಯಕ್ಷ್ಮನಾಶನಮಾಚರೇತ್ ।
ಹೋಮೈಶ್ಚೈವ ಜಪೈಶ್ಚೈವ ಯಕ್ಷ್ಮನಾಶನಮಾಚರೇತ್ ॥

ಕ್ಷಯರೋಗಿಯನ್ನು ಕುಳ್ಳಿರಿಸಿಕೊಂಡು ಅಕ್ಷೀಭ್ಯಾಂತೇ ಸೂಕ್ತದಿಂದ ಆಜ್ಯಹೋಮ ಮಾಡಿ ಆ ಆಜ್ಯಸಿಕ್ತ ಕೈಯಿಂದ ರೋಗಿಯ ತಲೆ ಕಣ್ಣು ಕಿವಿ ಮೂಗು ಗಲ್ಲಗಳನ್ನು ಸ್ಪರ್ಶಿಸಿದರೆ ರೋಗ ಪರಿಹಾರ.

690 ಅಪೇಹೀತಿ ಜಪೇತ್ ಸೂಕ್ತಂ ಶುಚಿರ್ದುಃಸ್ವಪ್ನನಾಶನಂ ।
ದೇವಾಃ ಕಪೋತ ಇತಿ ತು ಕಪೋತಸ್ಯ ಪ್ರವೇಶನೇ ॥

691 ಸೂಕ್ತೇನ ಜುಹುಯಾದಾಜ್ಯಂ ಯಮದೂತಂ ಹತಂ ವಿದುಃ ।
ಸಪತ್ನಘ್ನಂ ಪ್ರಯುಂಜೀತ ಋಷಭಂ ಜಪಹೋಮಯೋಃ ॥

"ಅಪೇಹಿ ಮನಸಃ" ಎಂಬ ಸೂಕ್ತವು ದುಃಸ್ವಪ್ನನಾಶಕರವಾಗಿದೆ. ಪಾರಿವಾಳ ಮನೆಗೆ ಪ್ರವೇಶಿಸಿದರೆ "ದೇವಾಃ ಕಪೋತ" ಮೊದಲಾದ ಮಂತ್ರಗಳಿಂದ ಆಜ್ಯಹೋಮ ಮಾಡಬೇಕು. "ಋಷಭಂ ಮಾ" ಸೂಕ್ತ ಜಪ, ಹೋಮಗಳಿಂದ ಶತ್ರುನಾಶ.

692 ಯೇನೇದಮಿತಿ ವೈ ನಿತ್ಯಂ ಜಪೇತ ನಿಯತವ್ರತಃ ।
ಸಮಾಧಿಂ ಮನಸಸ್ತೇನ ವಿಂದತೇ ನೈವ ಮುಹ್ಯತಿ ॥

"ಯೇನೇದಂ ಭೂತಂ" ಎಂಬ ಶಿವಸಂಕಲ್ಪ (ಖಿಲ ಮಂತ್ರಗಳು) ಸೂಕ್ತವನ್ನು ನಿತ್ಯವೂ ಜಪಿಸಿದರೆ ಮನಶ್ಶಾಂತಿಯೂ, ಮೋಕ್ಷವೂ ಸಿದ್ಧಿಸುತ್ತದೆ.

693 ಮಯೋಭೂರ್ವಾತ ಇತಿ ತು ಗವಾಂ ಸ್ವಸ್ತ್ಯಯನಂ ಜಪೇತ್ ।
ಯವಾನಾಂ ತು ಘೃತಾಕ್ತಾನಾಂ ಕಾರೀಷೇಗ್ನೌ ಸಮಾಹಿತಃ ॥
ಜುಹುಯಾದ್ ಗೋಷ್ಠಮಧ್ಯೇ ತು ದಧಿಮಧ್ವಾಜ್ಯಸಂಸ್ಕೃತಾನ್ ।

shrinath.udupa@gmail.com



ಗೋವುಗಳ ಶುಭಕ್ಕಾಗಿ, ಕ್ರೂರಮೃಗಗಳಿಂದ ಅವುಗಳಿಗಐ ಹಿಂಸೆಯಾಗದಂತೆ ಕಾಪಾಡಲು "ಮಯೋಭೂರ್ವಾತಃ" ಎಂಬ ಸೂಕ್ತವನ್ನು ಜಪಿಸಿ, ತುಪ್ಪದಲ್ಲಿ ಬೆರೆಸಿದ ಜವೆಗೋಧಿಯನ್ನು ಹೋಮ ಮಾಡಬೇಕು. ಕೊಟ್ಟಿಗೆಯಲ್ಲಿ ಮೊಸರು, ಜೇನು ಬೆರೆಸಿದ ತುಪ್ಪದಿಂದ ಹೋಮಿಸಬೇಕು.

## ರಾಜ್ಯಾಭಿಷೇಕವಿಧಿ

694 ರಾಜಾನಮಭಿಷಿಚ್ಯೇತ ಪುಷ್ಯೇನ ಶ್ರವಣೇನ ವಾ ॥
ಪೌಷ್ಣಸಾವಿತ್ರ ಸೌಮ್ಯಾ-ಶ್ವಿರೋಹಿಣ್ಯಾಮುತ್ತರಾಸು ಚ ।
ಹುತ್ವಾಗ್ನಿಂ ರಾಜಲಿಂಗಾಭಿ: ಸಾವಿತ್ರ್ಯಾ ಪ್ರಯತ: ಶುಚಿ: ॥

695 ಮಹಾವ್ಯಾಹೃತಿಭಿಶ್ಚೈವ ಸಂಪಾತಾಭಿಹುತೋ ಭವೇತ್ ।
ಸರ್ವೌಷಧಿರಸೈ: ಶ್ಲಕ್ಷ್ಣೈ: ನದೀನಾಂ ಸಲಿಲೇನ ಚ ॥

696 ವ್ಯಾಘ್ರಚರ್ಮಣ್ಯಥಾಸೀನ- ಮಾಸಂದ್ಯಾಮಭಿಷಿಚ್ಯ ಚ ।
ತಿಷ್ಠನ್ ಪ್ರತ್ಯಙ್ಮುಖೋ ಬ್ರೂಯಾರ್ಜ್ಜಯತ್ವಂ ಪೃಥಿವೀ ಮಿಮಾಂ ॥

697 ಧರ್ಮಸ್ತೇ ನಿಖಿಲೋ ರಾಜನ್ ವರ್ಧತಾಂ ಪಾಲಯ ಪ್ರಜಾ: ।
ವರ್ಧತ್ವಂ ಚ ಶ್ರಿಯೈ ಪುಷ್ಟ್ಯೈ ಜಯಾಯಾಭ್ಯುದಯಾಯ ಚ ॥

698 ರಾಜಾನ: ಸಂತು ತೇ ಗೋತ್ರೇ ತತೋಽಪ್ರತಿರಥಂ ಜಪೇತ್ ।
ವೈಯಾಘ್ರಂ ತು ಭವೇಚ್ಚರ್ಮ ಸಮಿದೌದುಂಬರೀ ಭವೇತ್ ॥

699 ತ್ರಿರೇನಮಭಿಷಿಚ್ಯೈವಂ ದುಂದುಭೀನಭಿಮಂತ್ರಯೇತ್ ।
ಪ್ರಾಚ್ಯಾ ತ್ವಾದಿಶಿ ವಸವೋ ಹ್ಯಭಿಷಿಂಚಂತು ತೇಜಸೇ ॥

700 ದಕ್ಷಿಣಸ್ಯಾಂ ತ್ವಾ ದಿಶಿ ರುದ್ರಾ ಅಭಿಷಿಂಚಂತು ವೃದ್ಧಯೇ ।
ಪ್ರತೀಚ್ಯಾಂ ತ್ವಾ ದಿಶ್ಯಾದಿತ್ಯಾ ಅಭಿಷಿಂಚಂತು ಪುಷ್ಟಯೇ ॥

701 ವಿಶ್ವೇದೇವಾ ಉದೀಚ್ಯಾಂ ತ್ವಾ ಅಭಿಷಿಂಚಂತು ಶ್ರೇಯಸೇ ।

ಅಭಿಷಿಚ್ಯ ಚ ರಾಜಾನ-ಮಾಶೀರ್ಭಿರಭಿನಂದ್ಯ ಚ ||
ಆತ್ವಾಹಾರ್ಷಮಂತರೇಧೀ-ತ್ಯಥೈನಮಭಿಮಂತ್ರಯೇತ್||

ಪುಷ್ಯ ಅಥವಾ ಶ್ರವಣ ನಕ್ಷತ್ರದಲ್ಲಿ ರಾಜನಿಗೆ ಅಭಿಷೇಕ ಮಾಡಬೇಕು. ಅಭಿಷೇಕ ಕಾಲದಲ್ಲಿ ''ಆ ತ್ವಾ ಹಾರ್ಷಂ'' ಎಂಬ ಸೂಕ್ತ ಪಠಿಸಬೇಕು. ಮೊದಲು ವ್ಯಾಹೃತಿಗಳೊಂದಿಗೆ ಗಾಯತ್ರೀ ಹೋಮವನ್ನು ಮಾಡಬೇಕು. ನಂತರ ಹುಲಿಯ ಚರ್ಮ ಹೊದೆಸಿದ ಪೀಠದಲ್ಲಿ ರಾಜನನ್ನು ಕುಳ್ಳಿರಿಸಿ ''ಆಶುಃಶಿಶಾನಃ'' ಸೂಕ್ತ ಜಪಿಸಿ ಆಶೀರ್ವದಿಸಬೇಕು. ಪೂರ್ವಾದಿ ಚತುರ್ದಿಕ್ಕುಗಳಲ್ಲಿ ಕ್ರಮವಾಗಿ ವಸು, ರುದ್ರ, ಆದಿತ್ಯರು, ವಿಶ್ವೇದೇವತೆಗಳು ನಿನಗೆ ತೇಜಸ್ಸು, ಸಮೃದ್ಧಿ ದೇಹಪುಷ್ಟಿ ಯಶಸ್ಸನ್ನು ಕೊಡಲಿ ಎಂದು ಆಶೀರ್ವದಿಸಬೇಕು.

702 ಪತಂಗಮಿತಿ ವೈ ನಿತ್ಯಂ ಜಪೇದಜ್ಞಾನಭೇದನಂ |
ಮಾಯಾಭೇದನಮೇತದ್ಧಿ ಸರ್ವಾ ಮಾಯಾಃ ಪ್ರಬಾಧತೇ ||

703 ಶಾಂಬರೀಮಿಂದ್ರಜಾಲಾಂ ವಾ ಮಾಯಾಮೇತೇನ ವಾರಯೇತ್ |
ಅದೃಷ್ಟಾನಾಂ ಚ ಸತ್ವಾನಾಂ ಮಾಯಾ ಮೇತೇನ ಬಾಧತೇ |

''ಪತಂಗಮಕ್ತಂ'' ಎಂಬ ಸೂಕ್ತವನ್ನು ನಿತ್ಯ ಜಪಿಸಿದರೆ ಅಜ್ಞಾನನಾಶ, ಅಗೋಚರವಾದ ಮಾಟ, ಮಾಯಾ, ಇಂದ್ರಜಾಲಾದಿ ಕೃತ್ಯಗಳಿಂದಲೂ ಬಾಧಿಸಲ್ಪಡುವುದಿಲ್ಲ.

704 ತ್ಯಮೂಷ್ವಿತಿ ಸ್ವಸ್ತ್ಯಯನಂ ಜಪೇತ ನಿಯತವ್ರತ: ||

''ತ್ಯಮೂಷು ವಾಜಿನಂ'' ಎಂಬ ಸೂಕ್ತವನ್ನು ಜಪ ಮಾಡುತ್ತಿದ್ದರೆ ಸರ್ವದಾ ಶುಭಪ್ರಾಪ್ತಿ.

705 ಪುಷ್ಪಂ ದೃಷ್ಟ್ವಾ ತು ಯಾ ಗರ್ಭಂ ನ ಗೃಹ್ಣೀಯಾದ್ವಯೋನ್ವಿತಾ |
ವಿಷ್ಣುರ್ಯೋನಿಂ ನೇಜಮೇಷ ಯೋನಿಂ ಸ್ಪೃಷ್ಟ್ವಾ ತತೋ ಜಪೇತ್||

shrinath.udupa@gmail.com



ಸ್ತ್ರೀಯರಿಗೆ ಗರ್ಭವು ದೃಢವಾಗಿ ನಿಲ್ಲದಿದ್ದರೆ ''ವಿಷ್ಣುರ್ಯೋನಿಂ'' ಸೂಕ್ತವನ್ನೂ ''ನೈಜಮೇಷ'' ಎಂಬ ಖಿಲಸೂಕ್ತವನ್ನೂ ಪಠಿಸುತ್ತಾ ಯೋನಿಯನ್ನು ಸ್ಪರ್ಶಸಬೇಕು.

706 ಮಹಿತ್ರೀಣಾಮವೋಸ್ತ್ವಿತಿ ಪಥಿ ಸ್ವಸ್ತ್ಯಯನಂ ಜಪೇತ್ |

''ಮಹಿತ್ರೀಣಾಂ'' ಎಂಬ ಆದಿತ್ಯಾ ಸೂಕ್ತವನ್ನು ಜಪಿಸುತ್ತಾ ಪ್ರಯಾಣಿಸಿದರೆ ಶುಭಪಯಣ.

707 ಪ್ರಾಗ್ನಯೇಥ ದ್ವಿಷದ್ ದ್ವೇಷ್ಯಂ ಜಪೇದ್ ದ್ವಿಷ್ಯಸ್ಯ ನಿಷ್ಕೃತಿಂ ||

''ಪ್ರಾಗ್ನಯೇ ವಾಚಮೀರಯ'' ಎಂಬ ಸೂಕ್ತ ಪಾರಾಯಣದಿಂದ ಶತ್ರುದ್ವೇಷ ಶಮನ.

708 ಆಯಂಗೌಃ ಸಾರ್ಪರಾಜ್ಞೀ ತು ಸರ್ಪಾನೇತೇನ ಬಾಧತೇ |

ಸರ್ಪಬಾಧಾ ನಿವಾರಣೆಗಾಗಿ ''ಆಯಂಗೌಃ'' ಸೂಕ್ತವನ್ನು ಜಪಿಸಬೇಕು.

709 ಪವಿತ್ರಾಣಾಂ ಪವಿತ್ರಂ ತು ಜಪೇದೇವಾಘಮರ್ಷಣಂ |

710 ಅಪ: ಪ್ರವಿಶ್ಯ ಯಶ್ಚೈತತ್ ತ್ರಿ: ಪಠೇತ ಸಮಾಹಿತ: |
ಅಥಾಶ್ವಮೇಧಾವಭೃಥ-ಸ್ತಾದೃಶಂ ಮನುರಬ್ರವೀತ್ ||

711 ಅಶುಚ್ಯೇವ ನಿಮಚ್ಚಿತ್ವಾ ತ್ರಿ: ಪಠೇದ ಘಮರ್ಷಣಂ |
ಅಥಾಶ್ವಮೇಧಾವಭೃಥಾ ಏವಂ ತದೃಷಿರಬ್ರವೀತ್ ||

712 ಯಥಾಶ್ವಮೇಧ: ಕ್ರತುರಾಟ್ ಸರ್ವಪಾಪಪ್ರಣೋದನ: |
ತಥಾಘಮರ್ಷಣಂ ಸೂಕ್ತಂ ಸರ್ವಪಾಪಪ್ರಣೋದನಂ ||

713 ಸೇನಾದಾರಣಮೇತತ್ ಸ್ಯಾತ್ ನೈರ್ಹಸ್ಯಮಿತಿ ಶೌನಕ: |
ಮನಸಾ ಧ್ಯೇಯಮೇತತ್ತು ಮನ್ಯತೇ ಶೌನಕಸ್ತ್ವೃಷಿ: ||

''ಋತಂ ಚ ಸತ್ಯಂ'' ಎಂಬ ಸೂಕ್ತವು ಪವಿತ್ರತಮವಾಗಿದೆ. ಸ್ನಾನಕಾಲದಲ್ಲಿ ನೀರಿನಲ್ಲಿ ಮುಳುಗಿ 3 ಸಲ ಜಪಿಸ್ದರೆ ಅಶ್ವಮೇಧ ಯಾಗದ ಅವಭೃಥಕ್ಕೆ ಸಮ. ಅಶುಚಿಯಾಗಿದಾಗ್ಯೂ 3 ಸಲ ಇದನ್ನು ಪಠಿಸಿದರೆ ಶುದ್ಧನಾಗುವನು. ಅಶ್ವಮೇಧ ಯಾಗ ಮಾಡಿದರೆ ಹೇಗೆ ಸರ್ವಪಾಪನಾಶವಾಗುತ್ತದೋ ಅದರಂತೆ ಈ ಸೂಕ್ತ ಜಪದಿಂದ ಸರ್ವಪಾಪ ಶಮನವಾಗುವುದು.

714 ಸಂಸಮಿದ್ಯುವಸೇ ವೃಷನ್ ಸೌಭ್ರಾತೃಕರಣಂ ಮಹತ್ ।
ಜ್ಞಾತಿಭೇಧೇ ಪ್ರಯುಂಜೀತ ನ ಭಿದ್ಯಂತೇ ಕದಾಚನ ॥

ಸಹೋದರರಲ್ಲಿ ಜ್ಞಾತಿಗಳಲ್ಲಿ ವೈಮನಸ್ಯವಿದ್ದರೆ ''ಸಂಸಮಿದ್ಯುವಸೇ'' ಸೂಕ್ತದ ಪಠಣದಿಂದ ಸಾಂಮನಸ್ಯ ಉಂಟಾಗುತ್ತದೆ.

715 ಕೃತೇ ಭೇದೇ ತು ಸಂಜ್ಞಾನ - ಮೇತತ್ ಸಂಧಿಕರಂ ಜಪೇತ್ ।
ನ ತತ್ರ ಭೇದೋ ಭೂಯಃಸ್ಯಾ - ದ್ಯತ್ನೈತತ ಸತತಂ ಜಪೇತ್ ॥

ಭೇದ ಬುದ್ಧಿ ನಿವಾರಣೆಗಾಗಿ ''ಸಂಜ್ಞಾನ'' ಎಂಬ ಖಿಲಸೂಕ್ತ ಪಠಿಸಬೇಕು.

716 ತಚ್ಛಂಯೋರಾವೃಣೀಮಹ ಇತಿ ಸ್ವಸ್ತ್ಯಯನಂ ಜಪೇತ್ ।

''ತಚ್ಛಂ ಯೋಃ'' ಮಂತ್ರ ಜಪದಿಂದ ಸರ್ವತ್ರ ಶುಭ ಉಂಟಾಗುತ್ತದೆ.

717 ಮಹಾನಾಮ್ನ್ಯಃ ಪರಂಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ ॥
ಸಪತ್ನಘ್ನ್ಯಶ್ಚ ಪುಣ್ಯಾಶ್ಚ ಪಾವಮಾನ್ಯಃ ಪರಾಃ ಸ್ಮೃತಾಃ ।
ವೃಷ್ಟಿಕಾಮೋ ಜಪೇಚ್ಚೈತಾ ಆಪೋಹ್ಯೈತಾಃ ಸನಾತನಾಃ ॥

ಮಹಾನಾಮ್ನೀ ಮಂತ್ರಗಳು ಪರಮ ಪುಣ್ಯದಾಯಕಗಳು, ಶತ್ರುನಾಶಕಗಳೂ ಆಗಿವೆ. ಇವುಗಳನ್ನು ಜಪಿಸಿದರೆ ಸುವೃಷ್ಟಿಯೂ ಉಂಟಾಗುತ್ತದೆ.





718 ಓಂಕಾರಪೂರ್ವಾ ವ್ಯಾಹೃತಯೋ ಮಧುಚ್ಛಂದಸ ಆದಿತಃ ।
ಸೂಕ್ತಾನ್ಯಂತೇ ಮಹಾನಾಮ್ನ್ಯಃ ಸಂಹಿತಾ ಸಾಽಮೃತಾ ಸ್ಮೃತಾ ॥

719 ಅಮೃತತ್ವಂ ಯಯುರ್ವೇದಾಃ ಪೂರ್ವಂ ಸಂಹಿತಯಾನಯಾ ।
ಜಪೇದೇನಾಂ ಶುಚಿರ್ನಿತ್ಯ - ಮಮೃತತ್ವಂ ಸ ಗಚ್ಛತಿ ॥

720 ಅತ್ರೈವ ತು ಜಪೇನ್ಮಧ್ಯೇ ಪಿತೃಸೂಕ್ತಾನ್ಯನೇಕಶಃ ।
ಪಿತ್ರ್ಯಾಂ ತಾಂ ಸಂಹಿತಾಂ ವಿದ್ಯಾತ್ ಪಿತೄನ್ ಪ್ರೀಣಾತಿ ಚೈತಯಾ ॥

721 ಏವಮೇವ ಸಮಾಹೃತ್ಯ ವಾಸಸೀ ಸಂಹಿತಾ ಭವೇತ್ ।
ರೌದ್ರಾದಿತ್ಯಾ ವೈಶ್ವದೇವೀ ಯದ್ದೇವತ್ಯಾಂ ಚ ಕಾಮಯೇತ್ ॥

ಓಂಕಾರ, ವ್ಯಾಹೃತಿ, ಅಗ್ನಿಮೀಳೇ ಸೂಕ್ತದಿಂದ ಪ್ರಾರಂಭಿಸಿ ಮಹಾನಾಮ್ನಿಯವರೆಗೆ ಶುಚಿಯಾಗಿ ಪಠಿಸಿದರೆ ಅಮೃತತ್ವ ಪ್ರಾಪ್ತಿ. ಮಧ್ಯೆಬರುವ ಪಿತ್ರಗಳೂ ಪ್ರೀತರಾಗುತ್ತಾರೆ. ಎಲ್ಲ 33 ದೇವತೆಗಳೂ ತೃಪ್ತರಾಗುತಾರೆ.

## ವಾಸ್ತುಶಾಂತಿ ವಿಧಿಃ

722 ಕುರ್ವೀತ ವಾಸ್ತುಶಮನಂ ಮಧ್ಯೇ ಗೋಷ್ಠಸ್ಯ ಧರ್ಮವಿತ್ ।
ಪುಷ್ಪೈರ್ಗಂಧೈಶ್ಚ ಮಾಲ್ಯೈಶ್ಚ ವಾನಸ್ಪತ್ಯೈಸ್ತಥೋಷಧ್ಯೈಃ ॥

723 ವಾಸ್ತು ಸರ್ವಂ ಪ್ರವಿಕಿರೇತ್ ಸಪ್ತಧಾನ್ಯೈಸ್ತಥೈವ ಚ ।
ವಾಸ್ತೋಷ್ಪತಿಂ ಯಜೇಚ್ಚಾತ್ರ ಪಾಯಸೇನ ಬೃಹಸ್ಪತಿಂ ॥

724 ಔದುಂಬರ ಪಲಾಶೈಶ್ಚ ಬಲಿಂ ಪ್ರತಿದಿಶಂ ಹರೇತ್ ।
ಸೂರ್ಯೋ ವಾಯುರ್ಯಮಃ ಪಿತರೋ ವರುಣೋ ನಿರ್ಋತಿಸ್ತಥಾ ।

725 ಸೋಮೋ ಮಹೇಂದ್ರ ಇತ್ಯೇತಾ ದಿಕ್ಷು ದಿಗ್ದೇವತಾಃ ಸ್ಮೃತಾಃ ।
ದದ್ಯಾದ್ದಾನಂ ಬ್ರಾಹ್ಮಣೇಭ್ಯಃ ಶಿವಂ ಭವತು ವಾಸ್ತ್ವಿತಿ ॥

726 ಪ್ರತಿಸಂವತ್ಸರಂ ಕಾರ್ಯಂ ಗೃಹೇ ವೈ ಗೃಹಮೇಧಿನಾ ।
ಯಧ್ಯೇವಂ ಸವಿಧಂ ನಾನ್ಯ - ದನುಕ್ತಮಪಿ ಕಿಂಚನ ॥

727 ಅಗ್ನಿಮಿಂದ್ರಮಥೋ ವಾಯುಂ ಸೂರ್ಯಮನ್ಯಾಶ್ಚ ದೇವತಾ: ।
ಆರಾಧಯಿಷುರ್ಯೋ ಯೋ ಯಾ - ಮಭಿಧತ್ತೇ ತಥಾತ್ರತಾಂ ॥

ಗೃಹಶಾಂತಿ ವಿಧಿ ಮನೆಯಲ್ಲಿ ಶಾಂತಿಗಾಗಿ ವರ್ಷಕ್ಕೊಮ್ಮೆ ವಾಸ್ತುಶಾಂತಿ ಮಾಡಬೇಕು. ಗಂಧ, ಪುಷ್ಪ, ವನಸ್ಪತಿ, ಔಷಧಿಗಳು, ಸಪ್ತಧಾನ್ಯಗಳನ್ನು ಸರ್ವತ್ರ ಹರಡಬೇಕು. ಪಾಯಸ ಮಾಡಿ ಬೃಹಸ್ಪತಿ ಮತ್ತು ವಾಸ್ತುವಿಗೂ ಅತ್ತಿ ಮತ್ತು ಮುತ್ತುಗಗಳಿಂದ ಹೋಮಿಸಿ, ಸೂರ್ಯ, ವಾಯು, ಯಮ, ಪಿತೃಗಳು, ವರುಣ, ನಿರ್ಋತಿ, ಸೋಮ, ಇಂದ್ರರಿಗೆ 8 ದಿಕ್ಕಿನಲ್ಲಿ ಬಲಿ ನೀಡಬೇಕು. ನಂತರ ಬ್ರಾಹ್ಮಣರಿಗೆ ದಾನಾದಿಗಳನ್ನು ಕೊಟ್ಟು ''ಶಿವಂ ವಾಸ್ತು'' ಎಂದು ಹೇಳಿಸಬೇಕು.

728 ಅಭಿರೂಪೇಣ ಸೂಕ್ತೇನ ಯಥಾದಿಷ್ಟಂ ಪ್ರಯೋಜನಂ ।
ಋಷೀಣಾಂ ಮಂತ್ರದೃಷ್ಟೇನ ಪ್ರತ್ಯಕ್ಷಾತ್ ಸಿದ್ಧಿರಿಷ್ಯತೇ ॥

729 ಸರ್ವತ್ರ ದಕ್ಷಿಣಾಂ ದದ್ಯಾ-ದ್ಧನಂ ವಾ ಕರ್ಮಸಿದ್ಧಯೇ ।
ನತ್ವೇವಾದಕ್ಷಿಣಂ ಕರ್ಮ ಕಿಂಚಿದಸ್ತೀತಿ ಶೌನಕ: ॥

730 ಶಕ್ತ್ಯಾ ಹಿ ಪೂರ್ಣಪಾತ್ರೇಣ ಸಂಮಿತಾಪ್ಯಂತತೋ ಭವೇತ್ ।
ತಸ್ಮಾತ್ ಸ್ವಲ್ಪಾಪಿ ದಾತವ್ಯಾ ದಕ್ಷಿಣಾ ಕರ್ಮಸಿದ್ಧಯೇ ॥

731 ಋಷಭ್ಯೈಕಾದಶಾ ದದ್ಯಾದ್ಯೇನ ವಾ ತುಷ್ಯತೇ ಗುರು: ।
ಧರ್ಮಜ್ಞೆ ಸತ್ಯವಾದಿನಿ ಬ್ರಹ್ಮದಾನಂ ಪ್ರದೀಯತೇ ॥

732 ತದಿದಂ ಪರಮಂ ಬ್ರಹ್ಮ ಗೃಹ್ಯಂ ಪಾವನಮದ್ಭುತಂ ।
ನಾಪ್ರಶಾಂತಾಯ ದಾತವ್ಯಂ ನಾಪುತ್ರಾಯಾತಪಸ್ವಿನೇ ।
ನಾಸಂವತ್ಸರೋಷಿತಾಯ ನಾಶಿಷ್ಯಾಯಾಹಿತಾಯ ಚ ॥

ಅಗ್ನಿ, ಇಂದ್ರ, ವಾಯು, ಸೂರ್ಯಾದಿ ಯಾವ ದೇವತೆಗಳನ್ನು ಕುರಿತು

shrinath.udupa@gmail.com



ಯಾವ ಸೂಕ್ತದಿಂದ ಅಥವಾ ಮಂತ್ರದಿಂದ ಯಾವ ವಿಧಿಯು, ಪ್ರಯೋಜನವೂ. ಇದುವರೆಗೆ ಹೇಳಲ್ಪಟ್ಟಿತೋ ಎಲ್ಲವೂ ಖಂಡಿತವಾಗಿಯೂ ಸಿದ್ಧಿಸುತ್ತದೆ. ಎಲ್ಲ ಕರ್ಮಗಳಲ್ಲೂ ಸಿದ್ಧಿಗಾಗಿ ದಾನ, ದಕ್ಷಿಣೆ ಅವಶ್ಯ ಕೊಡಬೇಕು. ದಕ್ಷಿಣೆಯಿಲ್ಲದಿದ್ದರೆ ಅದು ಫಲಹೀನ-ಎಂದು ಶೌನಕರು ತಿಳಿಸುತ್ತಾರೆ. ಶಕ್ತ್ಯನುಸಾರ ದಕ್ಷಿಣೆ ಕೊಡಲೇಬೇಕು. 11 ಎತ್ತುಗಳನ್ನು ದಾನ ಮಾಡಿದರೆ ಗುರುವು ಸುಂಪ್ರೀತನಾಗುತ್ತಾನೆ. ದಾನವನ್ನು ಧರ್ಮಜನಾದ, ಸತ್ಯಪರಾಯಣನಾದ ಬ್ರಾಹ್ಮಣನಿಗೇ ಕೊಡಬೇಕು.

ಈ-ಇದುವರೆಗೆ ಹೇಳಲ್ಪಟ್ಟ-ಜ್ಞಾನವನ್ನು ವಿಷಯವನ್ನು
ಶಾಂತಮನಸ್ಕನಲ್ಲದವನಿಗೆ, ಪುತ್ರರಹಿತನಾದವನಿಗೆ,
ತಪಸ್ವಿಯಲ್ಲದವನಿಗೆ, ಒಂದು ವರ್ಷವೂ ಅಂತೇವಾಸಿಯಾಗದ,
ಅಶಿಷ್ಯನಿಗೆ, ಉಪಕಾರಿಯಲ್ಲದವನಿಗೆ ತಿಳಿಸಬಾರದು.

ಇತಿ ಚತುರ್ಥೋಽಧ್ಯಾಯಃ

## ಇತಿ ಋಗ್ವಿಧಾನಮ್